WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಫೆಬ್ರವರಿ ೨೩, ೨೦೧೨ (ಫಾಲ್ಗುಣ ೪, ಶಕ ವರ್ಷ ೧೯೩೩) | ಸಂಚಿಕೆ ೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಸುರಳಿಕಲ್ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2010, ದಿನಾಂಕ : 27–11–2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವ/ಬಿಜೆಪಿ/ಎಇ–6/2011–12/5558, ದಿನಾಂಕ: 31–10–2011.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಸುರಳಿಕಲ್ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 428.00 ಲಕ್ಷ ಮೊತ್ತದ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯರವರ ಕಛೇರಿ ನೋಂದಣಿ ಸಂಖ್ಯೆ : 183/2010–11 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 8–7–2011 |
| ಕನ್ನಡ ಪ್ರಭ ದಿನ ಪತ್ರಿಕೆ | 7–7–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿರುತ್ತಾರೆ. ಇವರು ಅರ್ಹತೆ ಹೊಂದಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಿಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 4,03,37,588/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 4,14,23,908/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ಮೆ. ಅಭಿರಾಮ ಇನ್‌ಫ್ರಾ ಪ್ರಾಜೆಕ್ಟ್ಸ್ ಪ್ರೈ.ಲಿ., ಒಂದನೇ ದರ್ಜೆ ಗುತ್ತಿಗೆದಾರರು | 5,47,54,598/– | 35.74 ಹೆಚ್ಚು | 32.18 ಹೆಚ್ಚು |

ಮೇಲ್ಕಂಡಂತೆ ಮೆ. ಅಭಿರಾಮ ಇನ್‌ಫ್ರಾ ಪ್ರಾಜೆಕ್ಟ್ಸ್ ಪ್ರೈ. ಲಿ., ಒಂದನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 32.18 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 10–12–2011ರ ಪತ್ರದಲ್ಲಿ ಕಾಮಗಾರಿಯನ್ನು ಅವರು ನಮೂದಿಸಿರುವ ದರಗಳನ್ನು ಕಡಿಮೆಗೊಳಿಸಿ ರೂ. 4,80,51,733/–ಗಳಿಗೆ ಟೆಂಡರನ್ನು ಅನುಮೋದಿಸಲು ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 4,14,23,908/–ಗಳ ಮೇಲೆ ಶೇ. 16.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,80,51,733/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 78 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 5ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಸುರಳಿಕಲ್ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 4,14,23,908/–ಗಳ ಮೇಲೆ ಶೇ. 16.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,80,51,733/– ಗಳಿಗೆ (ರೂ. ನಾಲ್ಕು ಕೋಟಿ ಎಂಬತ್ತು ಲಕ್ಷ ಐವತ್ತೊಂದು ಸಾವಿರದ ಏಳುನೂರ ಮೂವತ್ತಮೂರು ಮಾತ್ರ) ಗಳಿಗೆ ಮೆ. ಅಭಿರಾಮ ಇನ್‌ಫ್ರಾ ಪ್ರಾಜೆಕ್ಟ್ಸ್ ಪ್ರೈ.ಲಿ., ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 257 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಸನೀಇ 120 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ : 4–1–2012.**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಪರಿಹಾರ ಪಾವತಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ : ಸನೀಇ 120 ಭೂಸ್ವಾಪ್ರ 2011, ದಿನಾಂಕ : 28–10–11 ರಂದು ಹೊರಡಿಸಲಾದ ಆದೇಶದ ಪ್ರಸ್ತಾವನೆಯ ಭಾಗದಲ್ಲಿರುವ ಪಟ್ಟಿಯನ್ನು ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಮದಿನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 15/04 | 93 | 2–01 | 570825 |
| 2 | 16/04 | 95/1 | 0.07 | 49787 |
| 3 | 17/04 | 95/2 | 0–22 | 155403 |
| 4 | 18/04 | 99/3 | 0–24 | 169485 |
| 5 | 19/04 | 102/2 | 0–05 | 35705 |
| 6 | 20/40 | 102/1 | 0–38 | 371592 |
| | | | **ಒಟ್ಟು** | **1352797** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 258 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲ ಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಸನೀಇ 74 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 24–12–2011.**

ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕಿನ ಗೊಡಚಿನಮಲ್ಕಿ ಗ್ರಾಮದ ಹತ್ತಿರ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ : ಸನೀಇ 74 ಅಪಿಬಂ 2011 (ತಾಂತ್ರಿಕ), ದಿನಾಂಕ: 7–12–2011 ರಂದು ಹೊರಡಿಸಲಾದ ಆದೇಶದಲ್ಲಿ **"ಟೆಂಡರಿಗಿಡಲಾದ ಮೊತ್ತ ರೂ. 84,21,924/–ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,00,76,321/– (ರೂ. ಒಂದು ಕೋಟಿ ಎಪ್ಪತ್ತಾರು ಸಾವಿರದ ಮುನ್ನೂರ ಇಪ್ಪತ್ತೊಂದು ಮಾತ್ರ)"** ಎಂಬುದರ ಬದಲಾಗಿ **"ಟೆಂಡರಿಗಿಡಲಾದ ಮೊತ್ತ ರೂ. 84,21,924/–ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 96,00,993/– (ರೂ. ತೊಂಬತ್ತಾರು ಲಕ್ಷ ಒಂಬೈನೂರ ತೊಂಭತ್ಮೂರು ಮಾತ್ರ)"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 259 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಸುತ್ತೋಲೆ**

**ಸಂಖ್ಯೆ : ಸಿಆಸುಇ 54 ಸೇಇವಿ 2011, ಬೆಂಗಳೂರು, ದಿನಾಂಕ : 27–12–2011.**

**ವಿಷಯ :** ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(4)ರನ್ವಯ ಇಲಾಖಾ ವಿಚಾರಣೆಯ ಪ್ರಕರಣಗಳಲ್ಲಿ ಲೋಕಾಯುಕ್ತ ಸಂಸ್ಥೆಗೆ ಶೀಘ್ರವಾಗಿ ವರದಿ ಕಳುಹಿಸುವ ಬಗ್ಗೆ.

**ಉಲ್ಲೇಖ :** ಉಪ ನಿಬಂಧಕರು (ವಿಚಾರಣೆಗಳು–5), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ : 3–11–2011 ರ ಪತ್ರ ಸಂಖ್ಯೆ: ಕಂಪ್ಲೇಂಟ್/ಉಪಲೋಕ್/ಬಿಜಿಎಂ/298/2008/ ಡಿಆರ್ಇ–5,

ಸರ್ಕಾರಿ ನೌಕರರು ದುರ್ನಡತೆ ಎಸಗಿದ್ದಾರೆಂದು ಲೋಕಾಯುಕ್ತ ಸಂಸ್ಥೆ ಸಾರ್ವಜನಿಕರಿಂದ ದೂರು ಸ್ವೀಕರಿಸಿದ ಮೇರೆಗೆ ನಡೆಸಿರುವ ಪ್ರಾಥಮಿಕ ತನಿಖೆಯಲ್ಲಿ ಸದರಿ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿದೆಯೆಂದು ಕಂಡು ಬಂದಾಗ ಅಂತಹವರ ಮೇಲೆ ಇಲಾಖಾ ವಿಚಾರಣೆ ನಡೆಸಲು ಸಂಬಂಧಪಟ್ಟ ಇಲಾಖೆಗೆ ಮಾನ್ಯ ಲೋಕಾಯುಕ್ತರು/ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರನ್ವಯ ಕಳುಹಿಸಿದ ವರದಿಯ ಮೇಲೆ ತೆಗೆದುಕೊಂಡ ಕ್ರಮದ ಬಗ್ಗೆ ಲೋಕಾಯುಕ್ತ ಸಂಸ್ಥೆಗೆ ಕೂಡಲೇ ತಿಳಿಸುತ್ತಿಲ್ಲವೆಂದು ಹಾಗೂ ಕೆಲವು ಇಲಾಖೆಗಳು ಕ್ರಮ ಕೈಗೊಂಡರೂ ನೆನಪೋಲೆಗಳನ್ನು ಕಳುಹಿಸಿದ ನಂತರವೇ ಸದರಿ ಮಾಹಿತಿಯನ್ನು ಲೋಕಾಯುಕ್ತ ಸಂಸ್ಥೆಗೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಆದ್ದರಿಂದ, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ರ ಕಲಂ 12(3)ರಲ್ಲಿ ಲೋಕಾಯುಕ್ತ ಸಂಸ್ಥೆಯಿಂದ ಸ್ವೀಕೃತವಾಗುವ ವರದಿಗಳ ಮೇಲೆ ಸದರಿ ಅಧಿನಿಯಮದ ಕಲಂ 12(4)ರಲ್ಲಿ ನಿಗದಿಪಡಿಸಿರುವ ಅವಧಿಯೊಳಗೆ ತಪ್ಪದೇ ಕ್ರಮ ಕೈಗೊಂಡು ಲೋಕಾಯುಕ್ತ ಸಂಸ್ಥೆಗೆ ಕ್ರಮವಾಗಿ ತಿಳಿಸತಕ್ಕದ್ದು.

ಈ ಸೂಚನೆಗಳನ್ನು ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ತಮ್ಮ ಇಲಾಖೆಗಳ ಆಡಳಿತಾತ್ಮಕ ವ್ಯಾಪ್ತಿಯಲ್ಲಿ ಬರುವ ಸಂಬಂಧಪಟ್ಟ ಎಲ್ಲಾ ಶಿಸ್ತು ಪ್ರಾಧಿಕಾರಗಳಿಗೆ ಕಟ್ಟುನಿಟ್ಟಾಗಿ ಪಾಲಿಸುವಂತೆ ಸೂಚಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮೊಹಮ್ಮದ್ ಸನಾವುಲ್ಲ**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಪಿ.ಆರ್. 260

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಲ್ಲಿ ಹೆಚ್ಚುವರಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 411 ಸಅಸೇ 2008, ದಿನಾಂಕ: 28–07–2009.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 559 ಸಅಸೇ 2010, ದಿನಾಂಕ: 04–03–2011.
3. ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಸನೀಇ 108 ಸೇಸಎ 2011, ದಿನಾಂಕ: 14–09–2011.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರಿ ಸಚಿವಾಲಯದ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಲ್ಲಿ ಹೆಚ್ಚುವರಿಯಾಗಿ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಿ ಮೇಲೆ ಉಲ್ಲೇಖ (2)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 27–07–2011ರ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್<br>(ವೇತನ ಶ್ರೇಣಿ ರೂ. 14,050–25050) | 01 |
| 2. | ಸಹಾಯಕ ಇಂಜಿನಿಯರ್<br>(ವೇತನ ಶ್ರೇಣಿ ರೂ. 11,400–21,600) | 03 |
| 3. | ಶೀಘ್ರಲಿಪಿಗಾರರು<br>(ವೇತನ ಶ್ರೇಣಿ ರೂ. 8,000–14,800) | 01 |

ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯು ದಿನಾಂಕ: 04–03–2011 ರ ಆದೇಶದಲ್ಲಿ ತಾತ್ಕಾಲಿಕವಾಗಿ ಮುಂದುವರಿಸಲಾದ 5 ಹುದ್ದೆಗಳು ಜಲಸಂಪನ್ಮೂಲ ಇಲಾಖೆಗೆ ಅವಶ್ಯಕತೆ ಇರುವುದರಿಂದ ಸದರಿ ಹುದ್ದೆಗಳನ್ನು ಮತ್ತೆ ದಿನಾಂಕ: 28–07–2011 ರಿಂದ 1 ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 594 ಸಅಸೇ 2011, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಲ್ಲಿ ತಾತ್ಕಾಲಿಕವಾಗಿ ಸೃಜಿಸಿ ಮುಂದುವರೆಸಲಾದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 28–07–2011 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವೇತನ ಶ್ರೇಣಿ ರೂ. 14050–25050) | 01 |
| 2. | ಸಹಾಯಕ ಇಂಜಿನಿಯರ್ (ವೇತನ ಶ್ರೇಣಿ ರೂ. 11,400–21,600) | 03 |
| 3. | ಶೀಘ್ರಲಿಪಿಗಾರರು (ವೇತನ ಶ್ರೇಣಿ ರೂ. 8,000–14,800) | 01 |

ಮೇಲ್ಕಂಡ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ದಿನಾಂಕ: 28–07–2009 ರ ಆದೇಶದಲ್ಲಿ ನಿಗದಿ ಪಡಿಸಲಾದ ಕ್ರಮಗಳನ್ನು ಅನುಸರಿಸಲು ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಪಿ.ಆರ್. ನಂ. 261

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಕುರಿತು.

**ಓದಲಾಗಿದೆ :** 01–02–2010ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30 ವಿಮಾಆ 2008.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ಧಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್. ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವ ಇತ್ಯಾದಿಗಾಗಿ ನಾನಾ ಸಂಸ್ಥೆಗಳನ್ನು ಸಂಕ್ಷಿಪ್ತಗೊಳಿಸಿ, ಮಾರಾಟಗಾರರ ಪಟ್ಟಿಗೆ ಮೇಲೆ ಓದಲಾದ ಸರ್ಕಾರದ ಆದೇಶದ ಮೂಲಕ ಅನುಮೋದನೆ ನೀಡಲಾಗಿದೆ. ಸದರಿ ಪಟ್ಟಿಯಲ್ಲಿರುವ ಸಂಸ್ಥೆಗಳ ಸಿಂಧುತ್ವವು 31–12–2011ಗೆ ಕೊನೆಗೊಳ್ಳಲಿದೆ. 2012–2013ನೇ ಸಾಲಿಗೆ ಹೊಸ ಪಟ್ಟಿ ಸಿದ್ಧಪಡಿಸುವ ಪ್ರಕ್ರಿಯೆ ಪ್ರಾರಂಭವಾಗಿದ್ದು, ಇನ್ನೂ ಅಂತಿಮವಾಗಿಲ್ಲವಾದ್ದರಿಂದ ಸದರಿ ಆದೇಶದನ್ವಯ ಪ್ರಸ್ತುತ ಚಾಲ್ತಿಯಲ್ಲಿರುವ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು ವಿಸ್ತರಿಸುವುದು ಅವಶ್ಯವಾಗಿದೆ. ಅದರಂತೆ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 32 ವಿಮಾಆ 2011, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2011**

2. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕಿಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ಧಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್., ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ, ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವ ಇತ್ಯಾದಿಗಾಗಿ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿನ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ: 01–01–2012 ರಿಂದ 15–02–2012 ರವರೆಗೆ ಅಥವಾ ಹೊಸ ಪಟ್ಟಿ ಸಿದ್ಧಗೊಳ್ಳುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಪ್ರಶಾಂತ ಕುಮಾರ್**

ಪೀಠಾಧಿಕಾರಿ–2

ಪಿ.ಆರ್. ನಂ. 262

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಎಸ್.ಕೆ. ಕುಂದರಗಿ, ಭೂಗೋಳಶಾಸ್ತ್ರ ಉಪನ್ಯಾಸಕರು, ಮಹಾಂತ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜು, ಧಾರವಾಡ ಇವರ ನೇಮಕಾತಿಯನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಡಿ 273 ಯುಪಿಸಿ 96, ದಿನಾಂಕ: 04–06–1998.
2. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:59:ವೇಅ:ಖಾಕಾವಿ–2/95–96, ದಿನಾಂಕ: 05–08–2009 ಮತ್ತು 05–10–2009.
3. ಆಡಳಿತ ಮಂಡಳಿಯ ಅಧ್ಯಕ್ಷರಾದ ಮಾನ್ಯ ಶ್ರೀ ಶ್ರೀ ಶ್ರೀ ಮುರುಘರಾಜೇಂದ್ರ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 11–09–2009 ರಂದು ಜರುಗಿದ ಸಭೆಯ ನಿರ್ಣಯ.
4. ಸರ್ಕಾರಿ ಆದೇಶ ಸಂಖ್ಯೆ: ಇಡಿ 170 ಯುಪಿಸಿ 2009, ದಿನಾಂಕ: 16–11–2009.
5. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:59:ವೇಅ:ಖಾಕಾವಿ:95–96:ಪಿಸಿಸಿ–2, ದಿನಾಂಕ: 23–06–2011.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 04–06–1998ರ ಆದೇಶದಲ್ಲಿ ಧಾರವಾಡದ ಎಸ್.ಜೆ.ಎಂ. ಮಹಾಂತ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜನ್ನು ದಿನಾಂಕ: 01–04–1998 ರಿಂದ ಜಾರಿಗೆ ಬರುವಂತೆ ವೇತನಾನುದಾನಕ್ಕೆ ಒಳಪಡಿಸಲಾಗಿದೆ. ಮೇಲೆ ಕ್ರಮಾಂಕ (2)ರಲ್ಲಿ

ಓದಲಾದ ದಿನಾಂಕ: 05–08–2009ರ ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯ ವರದಿಯಲ್ಲಿ ಧಾರವಾಡದ ಎಸ್.ಜೆ.ಎಂ. ಮಹಾಂತ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜಿನ ಆಡಳಿತ ಮಂಡಳಿಯವರು ಈ ಕೆಳಕಂಡ ಉಪನ್ಯಾಸಕರುಗಳನ್ನು ನೇಮಕಾತಿ ಮಾಡಿಕೊಂಡಿರುತ್ತಾರೆ.

1) ಶ್ರೀಮತಿ ಎಂ.ಬಿ. ಅಳಗವಾಡಿ, ಹಿಂದಿ ಉಪನ್ಯಾಸಕರು

2) ಶ್ರೀಮತಿ ಜೆ.ಪಿ. ಯಂಡಿಗೇರಿ, ಪತ್ರಿಕೋದ್ಯಮ ಹಾಗೂ ಸಮೂಹ ಸಂವಹನ ಉಪನ್ಯಾಸಕರು.

ಸದರಿ ಕಾಲೇಜಿನಲ್ಲಿ ಪ್ರಾರಂಭಿಸಿರುವ ಭೂಗೋಳಶಾಸ್ತ್ರ, ಹಿಂದಿ ಹಾಗೂ ಪತ್ರಿಕೋದ್ಯಮ ವಿಷಯಗಳನ್ನು 1993–94 ರಿಂದ ಅನುದಾನರಹಿತ ವಿಷಯಗಳಾಗಿ ಪ್ರಾರಂಭಿಸಲು ಅನುಮತಿ ನೀಡಿರುವುದರಿಂದ ಪ್ರಸ್ತುತ ವೇತನಾನುದಾನಕ್ಕೆ ಒಳಪಡಿಸಲು ಅವಕಾಶವಿರುವುದಿಲ್ಲವೆಂದು ಕಾಲೇಜು ಶಿಕ್ಷಣ ಆಯುಕ್ತರು ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಶ್ರೀ ಎಸ್.ಜೆ.ಎಂ. ವಿದ್ಯಾಪೀಠದ ಶ್ರೀ ಮುರುಘಮಠ, ಚಿತ್ರದುರ್ಗ ಇಲ್ಲಿನ ಆಡಳಿತ ಮಂಡಳಿಯ ಅಧ್ಯಕ್ಷರಾದ ಮಾನ್ಯ ಶ್ರೀ ಶ್ರೀ ಶ್ರೀ ಮುರುಘರಾಜೇಂದ್ರ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 11–09–2009ರಂದು ಜರುಗಿದ ಸಭೆಯ ನಿರ್ಣಯದ ಪ್ರಕಾರ ಧಾರವಾಡದ ಎಸ್.ಜೆ.ಎಂ. ಮಹಾಂತ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಮಾಡಿಕೊಂಡಿರುವ ಇಬ್ಬರು ಉಪನ್ಯಾಸಕರುಗಳನ್ನು ಕಾರ್ಯಭಾರಕ್ಕನುಗುಣವಾಗಿ ಆಡಳಿತ ಮಂಡಳಿಯ ಅಧೀನದಲ್ಲಿರುವ ಇತರೆ ಕಾಲೇಜುಗಳಲ್ಲಿರುವ ಅನುದಾನಿತ ಖಾಲಿ ಹುದ್ದೆಗಳಿಗೆ ಎದುರಾಗಿ ಹುದ್ದೆ ಪರಿವರ್ತಿಸಿ ವೇತನಾನುದಾನಕ್ಕೆ ಒಳಪಡಿಸಲು ಸರ್ವಾನುಮತದಿಂದ ಒಪ್ಪಿ ಮೇಲೆ (3)ರಲ್ಲಿ ಓದಲಾದ ದಿನಾಂಕ: 11–09–2009ರ ಠರಾವಿನಲ್ಲಿ ತೀರ್ಮಾನಿಸಿರುತ್ತಾರೆ.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ: 16–11–2009ರ ಆದೇಶದಲ್ಲಿ ಸದರಿ ಕಾಲೇಜಿನ ಆಡಳಿತ ಮಂಡಳಿಯವರು ದಿನಾಂಕ: 01–07–1992 ರಂದು ಮಾಡಿಕೊಂಡಿರುವ ನೇಮಕಾತಿ ಹಾಗೂ ಉಪನ್ಯಾಸಕರುಗಳು ಸಲ್ಲಿಸಿರುವ ನಿರಂತರ ಸೇವೆಯನ್ನು ಗಣನೆಗೆ ತೆಗೆದುಕೊಂಡು ಎಸ್.ಜೆ.ಎಂ. ವಿದ್ಯಾಪೀಠ, ಚಿತ್ರದುರ್ಗ ಇದರ ವ್ಯಾಪ್ತಿಗೆ ಬರುವ ಎಸ್.ಜೆ.ಎಂ. ಕಾಲೇಜು, ಚಿತ್ರದುರ್ಗ ಇಲ್ಲಿನ ಉರ್ದು ವಿಷಯವನ್ನು ಹಿಂದಿ ವಿಷಯಕ್ಕೆ ಪರಿವರ್ತಿಸಿ ಹಾಗೂ ಎಸ್.ಜೆ.ಎಂ. ಕಲಾ, ವಾಣಿಜ್ಯ ಹಾಗೂ ವಿಜ್ಞಾನ ಕಾಲೇಜಿನ ಭೂಗರ್ಭಶಾಸ್ತ್ರ ವಿಷಯವನ್ನು ಪತ್ರಿಕೋದ್ಯಮ ಹಾಗು ಸಮೂಹ ಸಂವಹನ ವಿಷಯಕ್ಕೆ ಪರಿವರ್ತಿಸಿ ಈ ರೀತಿ ಪರಿವರ್ತಿಸಿದ ಎರಡೂ ಹುದ್ದೆಗಳನ್ನು ಧಾರವಾಡದ ಎಸ್.ಜೆ.ಎಂ. ಮಹಾಂತ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜಿಗೆ ಸ್ಥಳಾಂತರಿಸಿ, ಸ್ಥಳಾಂತರಿಸಿದ ಹುದ್ದೆಗಳಿಗೆ ಎದುರಾಗಿ ಶ್ರೀಮತಿ ಎಂ.ಬಿ. ಅಳಗವಾಡಿ ಮತ್ತು ಶ್ರೀಮತಿ ಜೆ.ಪಿ. ಯಂಡಿಗೇರಿ ಇವರುಗಳ ನೇಮಕಾತಿಯನ್ನು ವೇತನಾನುದಾನಕ್ಕೆ ಒಳಪಡಿಸಿ ಆದೇಶಿಸಲಾಗಿತ್ತು.

ಪ್ರಕರಣವನ್ನು ಪರಿಶೀಲಿಸಲಾಗಿ ಸದರಿ ಕಾಲೇಜಿನ ಆಡಳಿತ ಮಂಡಳಿಯವರು ಭೂಗೋಳಶಾಸ್ತ್ರದ ವಿಷಯದಲ್ಲಿ ಪೂರ್ಣ ಕಾರ್ಯಭಾರ ಹಾಗೂ ಹುದ್ದೆ ಖಾಲಿಯಿದ್ದು, ಅನುದಾನಿತ ಭೂಗರ್ಭಶಾಸ್ತ್ರದ ವಿಷಯದಲ್ಲಿ ಮಂಜೂರಾದ ಹುದ್ದೆಯಿದ್ದು, ಕಾರ್ಯಭಾರವಿರುವುದಿಲ್ಲವಾದ್ದರಿಂದ ಭೂಗೋಳಶಾಸ್ತ್ರ ವಿಷಯದ ಅಧ್ಯಾಪಕರಾದ ಶ್ರೀ ಎಸ್.ಕೆ. ಕುಂದರಗಿಯವರ ಹೆಸರನ್ನು ಭೂಗರ್ಭಶಾಸ್ತ್ರದ ವಿಷಯದಿಂದ ಭೂಗೋಳಶಾಸ್ತ್ರದ ವಿಷಯಕ್ಕೆ ಹುದ್ದೆ ಪರಿವರ್ತನೆ ಮಾಡಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವಂತೆ ಉಲ್ಲೇಖ (5)ರಲ್ಲಿರುವ ಪತ್ರದಲ್ಲಿ ಕಾಲೇಜು ಶಿಕ್ಷಣ ನಿರ್ದೇಶಕರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 118 ಯುಪಿಸಿ 2011 ಬೆಂಗಳೂರು, ದಿನಾಂಕ: 28–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಎಸ್.ಜೆ.ಎಂ. ವಿದ್ಯಾಪೀಠ, ಚಿತ್ರದುರ್ಗ ಇದರ ವ್ಯಾಪ್ತಿಗೆ ಬರುವ ಎಸ್.ಜೆ.ಎಂ. ಕಾಲೇಜು, ಚಿತ್ರದುರ್ಗ ಇಲ್ಲಿನ ಭೂಗರ್ಭಶಾಸ್ತ್ರದ ವಿಷಯದಿಂದ ಭೂಗೋಳಶಾಸ್ತ್ರದ ವಿಷಯಕ್ಕೆ ಹುದ್ದೆ ಪರಿವರ್ತಿಸಿ ಈ ರೀತಿ ಪರಿವರ್ತಿಸಿದ ಹುದ್ದೆಯನ್ನು ಧಾರವಾಡದ ಎಸ್.ಜೆ.ಎಂ. ಮಹಾಂತ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜಿಗೆ ಸ್ಥಳಾಂತರಿಸಿ, ಸ್ಥಳಾಂತರಿಸಿದ ಹುದ್ದೆಗೆ ಎದುರಾಗಿ ಶ್ರೀ ಎಸ್.ಕೆ. ಕುಂದರಗಿ ಇವರ ನೇಮಕಾತಿಯನ್ನು ಈ ಕೆಳಗಿನಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವೇತನಾನುದಾನಕ್ಕೆ ಒಳಪಡಿಸಿ ಆದೇಶಿಸಲಾಗಿದೆ.

ಈ ಸಂಬಂಧ ಉಂಟಾಗುವ ವೇತನ ವೆಚ್ಚವನ್ನು ಪ್ರಸಕ್ತ ಆರ್ಥಿಕ ವರ್ಷದಲ್ಲಿ ಇಲಾಖೆಗೆ ಒದಗಿಸಿರುವ ಆಯವ್ಯಯ ಹಂಚಿಕೆಯಲ್ಲಿ ಭರಿಸಿಕೊಳ್ಳಲು ಆದೇಶಿಸಿದೆ.

| ಕ್ರಮ ಸಂಖ್ಯೆ | ಉಪನ್ಯಾಸಕರ ಹೆಸರು | ಖಾಲಿ ಹುದ್ದೆ ವಿವರ | ನೇಮಕಾತಿ ದಿನಾಂಕ | ಅನುದಾನಕ್ಕೆ ಒಳಪಟ್ಟಿರುವ ವಿಷಯ | ಖಾಲಿ ಹುದ್ದೆಯ ಕಾಲೇಜಿನ ಹೆಸರು |
|---|---|---|---|---|---|
| 1 | ಶ್ರೀ ಎಸ್.ಕೆ. ಕುಂದರಗಿ, ಭೂಗೋಳಶಾಸ್ತ್ರ ಉಪನ್ಯಾಸಕರು | ಶ್ರೀ ಸುಜಯಶಾಂತ ಪ್ರಕಾಶ್ ಎಸ್. ಭೂಗರ್ಭಶಾಸ್ತ್ರ ಉಪನ್ಯಾಸಕರು ಸ್ವಯಂ ನಿವೃತ್ತಿ 30–08–2008 | 01–07–1992 | ಭೂಗೋಳಶಾಸ್ತ್ರ (ಭೂಗರ್ಭಶಾಸ್ತ್ರ ವಿಷಯವನ್ನು ಭೂಗೋಳಶಾಸ್ತ್ರ ವಿಷಯಕ್ಕೆ ಪರಿವರ್ತಿಸಿ) | ಎಸ್.ಜೆ.ಎಂ. ಕಾಲೇಜು, ಚಂದ್ರವಳ್ಳಿ ಚಿತ್ರದುರ್ಗ |

1. ಆದೇಶ ಸಂಖ್ಯೆ: ಇಡಿ 146 ಯುಪಿಸಿ 1979, ದಿನಾಂಕ: 03–10–1981 ಮತ್ತು ಈ ನಿಟ್ಟಿನಲ್ಲಿ ಆಗಿಂದಾಗ್ಗೆ ಹೊರಡಿಸಿರುವ ತಿದ್ದುಪಡಿ ಹಾಗೂ ಸ್ಪಷ್ಟೀಕರಣಗಳಿಗೆ ನಿಗದಿಪಡಿಸಿದ ಕಾರ್ಯಭಾರವನ್ನು ಹೊಂದಿರತಕ್ಕದ್ದು, ಅಲ್ಲದೆ ಮುಂದೆ ಸರ್ಕಾರ ವಿಧಿಸಬಹುದಾದ ಯಾವುದೇ ಷರತ್ತಿಗೊಳಪಟ್ಟಿರತಕ್ಕದ್ದು.
2. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.
3. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರಿ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

4. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು.
5. ಮುಂದೆ ಉದ್ಭವಿಸುವ ಹುದ್ದೆಗಳನ್ನು ಬ್ಯಾಕ್ ಲಾಗ್ ರಿಕ್ತಸ್ಥಾನಗಳೆಂದು ಪರಿಗಣಿಸಿ ಅವುಗಳನ್ನು ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡ ಮೀಸಲಾತಿಯ ಅನುಪಾತದನ್ವಯ ರಿಕ್ತಸ್ಥಾನ ತುಂಬುವತನಕ ಮುಂದುವರೆಸಿ ನೇಮಕಾತಿ ಮಾಡತಕ್ಕದ್ದು ಮತ್ತು ಈ ದಿಸೆಯಲ್ಲಿ ಸರ್ಕಾರವು ಆಗಿಂದಾಗ್ಗೆ ಹೊರಡಿಸುವ ಆದೇಶಗಳನ್ನು ಪಾಲಿಸತಕ್ಕದ್ದು.
6. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
7. ಈ ಉಪನ್ಯಾಸಕರು ನೇಮಕಾತಿ ಹೊಂದಿದ ದಿನಾಂಕದಂದು ಹಾಗೂ ತದನಂತರ ಹೊಂದಿರುವ ವಿದ್ಯಾರ್ಹತೆಯನ್ವಯ ಇವರುಗಳಿಗೆ ವೇತನ ಶ್ರೇಣಿಯನ್ನು ನಿಗದಿಪಡಿಸತಕ್ಕದ್ದು.
8. ಸದರಿ ಉಪನ್ಯಾಸಕರಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ನಿಯಮಗಳ ಪ್ರಕಾರ ವಯೋಮಿತಿ:ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಬಿ. ಉಳವಿ**

ಪಿ.ಆರ್. ನಂ. 263

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದಲ್ಲಿನ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಿಗೆ ಸಂಬಂಧಿಸಿದಂತೆ ಅನುದಾನ ಸಂಹಿತೆಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ರಾಜ್ಯದಲ್ಲಿನ ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳ ಆಡಳಿತ ಮಂಡಳಿಗಳ ಸಂಘ, ಬೆಂಗಳೂರು ಇವರ ಮನವಿ ದಿನಾಂಕ: 20–06–2011.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿನ ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳ ಆಡಳಿತ ಮಂಡಳಿಗಳ ಸಂಘವು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತುತ ಜಾರಿಯಲ್ಲಿರುವ ಅನುದಾನ ಸಂಹಿತೆ ಪ್ರಕಾರ ಅನುದಾನಕ್ಕೊಳಪಟ್ಟ 10 ಇಂಜಿನಿಯರಿಂಗ್ ಕಾಲೇಜುಗಳಿಗೆ ಸರ್ಕಾರವು ಶೇ. 85ರಷ್ಟು ಅನುದಾನವನ್ನು ನೀಡಲಾಗುತ್ತಿದೆ. ಆದರೆ ಪರಿಷ್ಕೃತ ಎಐಸಿಟಿಇ ವೇತನ ಶ್ರೇಣಿಯನ್ನು ಸಿಬ್ಬಂದಿಗಳಿಗೆ ಜಾರಿಗೊಳಿಸಲು ಆಡಳಿತ ವೆಚ್ಚವು ಹೆಚ್ಚಾಗುವುದರಿಂದ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿನ ಅನುದಾನಿತ ಕೋರ್ಸುಗಳಲ್ಲಿ ಸರ್ಕಾರಿ ಕೋಟಾದ ಸೀಟುಗಳಿಗೆ ಪಾವತಿಸುವ ಬೋಧನಾ ಶುಲ್ಕದ ಶೇ. 100 ರಷ್ಟನ್ನು ಸಂಸ್ಥೆಯೇ ಉಳಿಸಿಕೊಳ್ಳಲು ಅನುಮತಿ ನೀಡುವಂತೆ ಬೇಡಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಈ ಬೇಡಿಕೆಯ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 130 ಟಿಇಸಿ 2011 ಬೆಂಗಳೂರು, ದಿನಾಂಕ: 04ನೇ ಜನವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯದಲ್ಲಿನ ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಅನುದಾನಿತ ಕೋರ್ಸುಗಳಿಗೆ ಅನುದಾನ ಸಂಹಿತೆಗೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಆಡಳಿತ ಮಂಡಳಿಯವರು ಪಡೆಯುತ್ತಿರುವ ಶೇ. 100 ರಷ್ಟು ಬೋಧನಾ ಶುಲ್ಕವನ್ನು ಆಡಳಿತ ಮಂಡಳಿಯೇ ಉಳಿಸಿಕೊಳ್ಳಲು ಸರ್ಕಾರ ಅನುಮತಿಸಿದೆ.

(1) ಈ ಆದೇಶವು ದಿನಾಂಕ: 01–04–2012 ರಿಂದ ಹಾಗೂ ಮುಂದಿನ ಆದೇಶದವರೆಗೆ ಜಾರಿಯಲ್ಲಿರತಕ್ಕದ್ದು.
(2) ಸರ್ಕಾರಿ ಕೋಟಾದ ಸೀಟುಗಳಿಗೆ ಸರ್ಕಾರವು ಕಾಲಕಾಲಕ್ಕೆ ನಿಗದಿಪಡಿಸುವ ಶುಲ್ಕವನ್ನು ಮಾತ್ರ ಪಡೆಯತಕ್ಕದ್ದು.
(3) ಅನುದಾನಿತ ಕೋರ್ಸುಗಳಲ್ಲಿ ಶೇ. 95 ರಷ್ಟು ಸೀಟುಗಳು ಸರ್ಕಾರಿ ಕೋಟಾದ ಸೀಟುಗಳಾಗಿ ಇರತಕ್ಕದ್ದು.
(4) ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ನಿಯಮ/ಆದೇಶಗಳಿಗೆ ಬದ್ಧರಾಗಿರತಕ್ಕದ್ದು.
(5) ಒಂದು ವೇಳೆ ಈ ಮೇಲಿನ ಯಾವುದೇ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸಂಸ್ಥೆಗಳು ಶೇ. 100 ರಷ್ಟು ಬೋಧನಾ ಶುಲ್ಕ ಉಳಿಸಿಕೊಳ್ಳುವುದನ್ನು ನಿಯಮಾನುಸಾರ ರದ್ದುಪಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಜಗದೀಶ್**

ಪಿ.ಆರ್. ನಂ. 264

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯ ಅಧಿಕಾರಿಗಳಿಗೆ ಹಾಲಿಯಿರುವ ವಿತ್ತಾಧಿಕಾರವನ್ನು ಹೆಚ್ಚಿಸಿ ಮತ್ತು ಹೊಸದಾಗಿ ಆರ್ಥಿಕ ವಿತ್ತಾಧಿಕಾರವನ್ನು ನೀಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 72 ಇಎಫ್‌ಎಸ್ 2009, ದಿನಾಂಕ 25–08–2009

2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರಗಳ ಸಂಖ್ಯೆ: ಬಿಯುಡಿ–4/21/2010–11, ದಿನಾಂಕ 28–10–2010 ಮತ್ತು ಬಿಯುಡಿ–4/14/2008–09, ದಿನಾಂಕ 1–8–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪೊಲೀಸ್ ಇಲಾಖೆಯ ವಿವಿಧ ದರ್ಜೆಯ ಅಧಿಕಾರಿಗಳಿಗೆ ಆರ್ಥಿಕ ವಿತ್ತಾಧಿಕಾರವನ್ನು ಪರಿಷ್ಕರಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವ ದೃಷ್ಟಿಯಿಂದ ಹಾಗೂ ಸಾರ್ವಜನಿಕರಿಗೆ ಪೊಲೀಸ್ ಇಲಾಖೆಯ ಬಗ್ಗೆ ಸದಭಿಪ್ರಾಯ ಮೂಡಿಸಲು ದಿನಪತ್ರಿಕೆಗಳಲ್ಲಿ ಮತ್ತು ಟಿ.ವಿ. ಮಾಧ್ಯಮಗಳಲ್ಲಿ ಜಾಹಿರಾತು ನೀಡುವ ಅವಶ್ಯಕತೆ ಇರುತ್ತದೆ. ತುರ್ತು ಸಂದರ್ಭಗಳಲ್ಲಿ ಈ ರೀತಿ ಜಾಹೀರಾತು ನೀಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಮಂಜೂರಾತಿ ಆದೇಶ ಪಡೆಯಲು ಕಾಲಾವಕಾಶ ಕಡಿಮೆ ಇರುತ್ತದೆ ಹಾಗೂ ಪೊಲೀಸ್ ಇಲಾಖೆಯ ವಿವಿಧ ದರ್ಜೆಯ ಅಧಿಕಾರಿಗಳಿಗೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮತ್ತು ಸಶಸ್ತ್ರ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ಪೊಲೀಸ್ ಸಿಬ್ಬಂದಿಗಳಿಗೆ ಬಹುಮಾನವನ್ನು ಹಾಗೂ ಕೆಲವೊಂದು ಐಟಂಗಳಿಗೆ ಆರ್ಥಿಕ ವಿತ್ತಾಧಿಕಾರವನ್ನು ಮತ್ತಷ್ಟು ಹೆಚ್ಚಿಸುವ ಅಗತ್ಯತೆ ಕಂಡುಬಂದಿದೆ. ಇದಲ್ಲದೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ಮತ್ತು ರಾಜ್ಯ ಮಾನವ ಹಕ್ಕುಗಳ ಆಯೋಗವು ಪೊಲೀಸ್ ದೌರ್ಜನ್ಯಗೊಳಗಾದವರಿಗೆ ಪರಿಹಾರ ಮೊತ್ತ ನೀಡಲು ಆರ್ಥಿಕ ವಿತ್ತಾಧಿಕಾರ ಇರುವುದಿಲ್ಲ. ಆದ್ದರಿಂದ ಈ ಬಗ್ಗೆ ಪೂರ್ಣ ಅಧಿಕಾರ ನೀಡಲು ಆರ್ಥಿಕ ಪ್ರತ್ಯಯೋಜನೆಯ ಅವಶ್ಯಕತೆಯಿದೆಯೆಂದು ತಿಳಿಸಿ ಈ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರದ ಮಂಜೂರಾತಿಗಾಗಿ ಕಳುಹಿಸಿಕೊಟ್ಟಿರುತ್ತಾರೆ.

ಪೊಲೀಸ ಇಲಾಖೆಗೆ ಸಂಬಂಧಿಸಿದಂತೆ ದಿನಾಂಕ 22–11–2011ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ವಿಶೇಷ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಸಮಿತಿ ಸಭೆಯಲ್ಲಿ ಈ ವಿಷಯವನ್ನು ಚರ್ಚಿಸಿ ತೀರ್ಮಾನ ತೆಗೆದುಕೊಂಡಿರುತ್ತದೆ. ಅದರಂತೆ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 171 ಇಎಫ್‌ಎಸ್ 2010, ಬೆಂಗಳೂರು, ದಿನಾಂಕ : 03–01–2012**

ಪೊಲೀಸ್ ಇಲಾಖೆಯ ವಿವಿಧ ದರ್ಜೆಯ ಅಧಿಕಾರಿಗಳಿಗೆ ಆದೇಶ ಸಂಖ್ಯೆ: ಹೆಚ್‌ಡಿ 72 ಇಎಫ್‌ಎಸ್ 2009, ದಿನಾಂಕ 25–08–2009ರಲ್ಲಿ ಪರಿಷ್ಕರಿಸಿ ನಿಗದಿಪಡಿಸಿದ್ದ ಆರ್ಥಿಕ ವಿತ್ತಾಧಿಕಾರವನ್ನು ಭಾಗಷಃ ಮಾರ್ಪಡಿಸಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಕೆಲವು ಐಟಂಗಳಿಗೆ ಆರ್ಥಿಕಾಧಿಕಾರವನ್ನು ಮತ್ತಷ್ಟು ಹೆಚ್ಚಿಸಿ/ಹೊಸದಾಗಿ ಆರ್ಥಿಕ ಅಧಿಕಾರವನ್ನು ನಿಗದಿಪಡಿಸಲು ಸರ್ಕಾರದ ಮಂಜೂರಾತಿ ಆದೇಶ ನೀಡಲಾಗಿದೆ. ಉಳಿದಂತೆ ಮೇಲೆ ಓದಲಾದ ಆದೇಶದಲ್ಲಿ ನೀಡಲಾದ ಆರ್ಥಿಕ ಅಧಿಕಾರದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 366 ವೆಚ್ಚ 11/2011, ದಿನಾಂಕ 26–12–2011ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

Annexure to Government Order No. HD 171 EFS 2010, Dated 03-01-2012

**Delegation of special financial powers to Director General and Inspector General of Police, Commissioner of Police and other Head of Department & District level officers of Police Department**

| Existing Powers as per G.O. No. FD/39/TFP/2006, dated 16-09-2008 G.O. No. HD 72 EPS 2009, dated 25-8-2009 | | | | | | | Revised Financial Powers as per the recommendation of the ACS Committee | | | |
|---|---|---|---|---|---|---|---|---|---|---|
| Sl. No. | Item No. | Subject | Director General and Inspector General of Police | DGP AdsGp and IGsP having State jurisdiction/ Commissioners of Police Bangalore City | Other Heads of Department DGP (Crime & Training) (2) ADGP and IFP (3) Commissioner of Traffic & Road Safety (4) Commissioner of Police Mysore, Hubli-Dharwad (5) Range IGPs. (6) DIG-Chief office (7) DIG-Cod (8) DIG-O/o COP Bangalore city (9) DIG Intelligence (10) DIG Training 1. | District Level Officers (1) Supdt. Of Police (2) Director FSL (3) S.P.F.P.B. (4) Principal, PTS Channapatna (5) Principal, KSRP Training School (6) DCPs is cities of B'lore Mysore, Hubli-Dharwad (7) Other equivalent rank officers in Police Dept. (8) Addl. | Director General and Inspector General of Police | DGP AdsGP and IGsP having State jurisdiction | Other Heads of Department | District Level Officers |

| | | | Existing Powers | | | | Revised Powers | | | |
|---|---|---|---|---|---|---|---|---|---|---|
| Sl. No. | Item No. | Subject | Director General and Inspector General of Police | DGP AdsGp and IGsP having State jurisdiction | Other Heads of Departme nt | District Level Officers | Director General and Inspector General of Police | DGP AdsGP and IGsP having state jurisdiction | Other Heads of Department | District Level Officers |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 37 | To Sanction rewards to the police personnel for good service including Police Officers and other meritorious service | Rs. 3.00 lakhs in a year subject to maximum of Rs 6000/- per individual | Rs. 2.00 lakhs in a year subject to maximum of Rs. 4000/- per individual | Rs. 1.00 lakh in a year subject to maximum of Rs 2000/- per case and Rs 500/- per individual | Rs. 50000/- in a year subject to maximum of Rs. 2000/- per case and Rs. 500/- per individual | Rs. 25.00 lakhs in a year subject to maximum of Rs. 10000/- per individual | Rs. 3.00 lakhs in a year subject to maximum of Rs. 8000/-per individual | Rs. 2.00 lakh in a year subject to maximum of Rs. 5000/-per individual | Rs. 1.00 lakh in a year subject to maximu m of Rs. 5000/- per individual |
| 2 | | Approving companies quotations for recruitment process including printing of applications, question paper, Receiving of application, processing of applications, conducting different tests etc., reg. recruitment subject to following KTPP Rules | Nil | Nil | Nil | Nil | Estimates upto Rs. 2.00 crore p.a. for one recruitme nt work subject to availability of grants and following KTPP Act. & Rules | Estimates upto Rs. 1.00 crore p.a. for one recruitmen t work subject to availability of grants and following KTPP Act & Rules | Nil | Nil |
| 3 | | To Sanction remuneration to the supervisors etc., related to written examination work, remuneration to evaluation committee/subco mmittee and other staff for pre and post examination activities and remuneration to question paper setters, Expert committee | Ni. | Nil | Nil | Nil | Full Powers subject to approval of rates by Government | Rs. 15.00 lakhs per recruitment subject to approval of rates by Government | Rs. 20,000/- per recruitment subject to approval of rates by Government | Rs. 10,000/- per recruitment subject to approval of rates by Government |
| 4 | 7 | To sanction expenditure on publication of official advertisement in newspaper and Television (vide Rule 55 (1) of MCE) | Upto Rs. 50,000/- in each case subject to Rs. 5 lakhs p.a. | Upto Rs. 30,000/- in each case subject to Rs. 2 lakhs p.a. | Upto Rs. 25,000/- in each case subject to Rs. 1 lakh p.a. | Upto Rs. 10,000/- in each case subject to Rs. 50,000/- p.a. | Rs. 1.00 lakh in each case upto Rs. 50.00 lakhs p.a. subject to Budget Provision and guidelines of Department | Rs. 50,000 in each case upto Rs. 5.00 lakhs p.a. subject to Budget Provision and guidelines of Department of | Rs. 50,000 in each case upto Rs. 5.00 lakhs p.a. subject to Budget Provision and guidelines of Department of | Rs. 25,000 in each case upto Rs. 2.00 lakhs p.a. subject to Budget Provision and guidelines of Department of |

| | | | | | | | | | | |
|---|---|---|---|---|---|---|---|---|---|---|
| | | | | | | | of Information and Publicity | Information and Publicity | Information and Publicity | Information and Publicity |
| 5 | 34 | To sanction charges for: Barricading on important occasions like Dasara, visit of VIPs., Mastakabisheka etc., | Rs. 5.00 lakhs in each case | Rs. 2.00 lakhs in each case | Rs. 1.00 lakh in each case | Rs. 50,000 in each case | This power can be exercised under item No. 1 of G.O. No. FD 2 TFP 2010, dated 30-4-2010. | | | |
| 6 | 35 | To sanction purchase of equipment and clothing (Kit Articles to the Dept) | Rs. 2.00 lakhs in each time subject to limit of Rs. 20.00 lakhs p.a. | Rs. 1.00 lakh in each time subject to limit of Rs. 10.00 lakhs p.a. | Rs. 50,000 in each time subject to limit of Rs. 5.00 lakhs p.a. | Rs. 25,000 in each time subject to limit of Rs. 2.00 lakhs p.a. | Rs. 5.00 crore in each case subject to Budget Provisions and KTPP Act. | Rs. 5.00 lakhs in each case subject to Budget Provisions and KTPP Act. | Rs. 3.00 lakhs in each case subject to Budget Provisions and KTPP Act. | Nil |
| 7 | 40 | To meet expenditure towards training materials and files, Training conducted by Government organizations and also reputed private and public sector organizations | Rs. 50,000 each time limited to Rs. 5.00 lakhs p.a | Rs. 40,000 each time limited to Rs. 4.00 lakhs p.a | Rs. 20,000 each time limited to Rs. 2.00 lakhs p.a | Rs. 10,000 each time limited to Rs. 1.00 lakh p.a | Full powers | Rs. 1.00 lakh each time limited to Rs. 10,000 lakhs p.a. | Rs. 50,000/- each time limited to Rs. 5,00 lakhs p.a. | Rs. 20,000/- each time limited to Rs. 2,00 lakhs p.a. |
| 8 | 41 | To sanction charges for Scientific Tests like DNA, Narco analysis, brain mapping etc., and to send materials/documents etc., for expert opinion in criminal cases registered under PC or other criminal enactments | Rs. 50,000/- per case upto Rs. 2.00 lakhs p.a | Rs. 25,000/- per case upto Rs. 1.00 lakh p.a | Rs. 20,000/- per case upto Rs. 1.00 lakh p.a | Rs. 10,000/- per case upto Rs. Rs. 50,000/- p.a | Rs. 5.00 lakhs per case upto Rs. 50.00 lakhs p.a. | Rs. 2.00 lakhs per case upto Rs. 20.00 lakhs p.a. | Rs. 50,000/- per case upto Rs. 5.00 lakhs p.a | Rs. 25,000/- per case upto Rs. 2.00 lakhs p.a |
| 9 | 42 | To sanction Hire charges of KSRTC and BMTC Vehicles | Full Powers | Rs. 1.00 lakh each time provided the Police Dept. vehicles are not available | Rs. 50,000/- each time provided the Police Dept. vehicles are not available | Rs. 25,000/- each time provided the Police Dept. vehicles are not available | Full Powers provided the Police Dept. vehicles are not available | Full Powers provided the Police Dept. vehicles are not available | Full Powers provided the Police Dept. vehicles are not available | Rs. 1.00 lakh each time provided the Police Dept. vehicles are not available |
| 10 | 44 | Payments to expenses towards Horse & Dogs | Rs. 2.00 lakhs p.a. | Rs. 1.00 lakh p.a. | Rs. 50,000/- p.a. | Rs. 30,000/- p.a. | This power is already included in general delegation of powers under diet items vide G.O. No. FD 2 TFP 2010, dated 30-4-2010 under item No. 9 | | | |

| | | | | | | | | | | | |
|---|---|---|---|---|---|---|---|---|---|---|---|
| 11 | 47 | Photography/ video Audio records charges | Rs. 50,000/- each case | Rs. 25,000/- in each case | Rs. 10,000/- in each case | Rs. 5,000/- in each case | Rs. 10.00 lakhs in each case upto Rs. 50.00 lakhs p.a. | Rs. 5.00 lakhs in each case upto Rs. 25.00 lakhs p.a. | Rs. 2.00 lakhs in each case Rs. 10.00 lakhs p.a. | Rs. 1.00 lakh each case Rs. 5.00 lakhs p.a. |
| 12 | New Item | Police Summons Duty Pass renewal amount/Payment of Bus warrant charges to KSRTC | Nil | Nil | Nil | Nil | Full Powers | Full Powers | Full Powers | Full Powers |
| 13 | | Police Department study Report Entrustment of evaluation work/study report on police department activities to reputed organisations in the field | Nil | Nil | Nil | Nil | This can be exercised under the provision for procuring consultancy services under the KTPP Act. | | | |
| 14 | New Item | Sanction of compensation amount of victims on the recommendation of NHRC/SHRC | Nil | Nil | Nil | Nil | Full Powers | Full Powers | Nil | Nil |
| 15 | New items | Purchase of arms & ammunitions/ Tear Gas Munitions/weapon Spare Parts/Guages and incurring the cost of their transportation | Nil | Nil | Nil | Nil | Upto Rs. 5.00 crore subject to availability of Budget Provision and following KTPP Act, Rules | Nil | Nil | Nil |
| 16 | New item | Fabrication of vehicles bodies (including bullet proofing) | Nil | Nil | Nil | Nil | Not necessary. Should come to Government | | | |
| 17 | New item | For procurement for Trial/Evaluation of New Machines and Equipments, Arms & Ammunitions, Clothing & Tentages | Nil | Nil | Nil | Nil | Full Powers | Nil | Nil | Nil |

| | | | | | | | | | | |
|---|---|---|---|---|---|---|---|---|---|---|
| 18 | New item | Providing Computer Training to the staff through Public/Private Training Institutions for incurring expenditure on providing computer training to staff | Nil | Nil | Nil | Nil | This power is covered under training under item No. 21 of G.O. No. FD 2 TFP 2010, dated 30-4-2010 | Nil | Nil | Nil |
| 19 | New item | Powers of Land Acquisition | Nil | Nil | Nil | Nil | Not required. May obtain Government permission | | | |

*Note* : 1. All Powers are subject to Budget provision
2. All powers are subject to following guidelines, rules specified under KTPP Act.
3. Department should either follow General Delegation of powers or Special Delegation of powers to the Department

**B. Rajamma**
ಪಿ.ಆರ್. 265 Under Secretary to Govt. (Police Expenditure)
Home Department

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸಿ.ಕೆ. ರಾಮಯ್ಯ ಮಾಜಿ ಹೆಚ್.ಸಿ. ವಿಧಾನಸೌಧ ಪೊಲೀಸ್ ಠಾಣೆ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ ಬೆಂಗಳೂರು, ಇವರ ಆದೇಶ ಸಂಖ್ಯೆ: 131/ಡಿಇ/ಆರ್6/ಡಿಸಿಪಿಕೇ/93 ದಿ: 17–3–2001
2) ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಇವರ ಆದೇಶ ಸಂಖ್ಯೆ: 61/ಅಪೀಲು/2000–01 ದಿನಾಂಕ: 15–3–2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 11–11–2010.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/68/2010–11 ದಿನಾಂಕ: 23–3–2011

**ಪ್ರಸ್ತಾವನೆ :**

ಶ್ರೀ ಸಿ.ಕೆ. ರಾಮಯ್ಯ, ಇವರು ಬೆಂಗಳೂರು ನಗರದ ವಿಲ್ಸನ್ ಗಾರ್ಡನ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ನೀವು ದಿನಾಂಕ: 25–7–93 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು ಗೈರುಹಾಜರಿ ಸೂಚನಾ ಪತ್ರ ಜಾರಿಯಾದ ಮೇಲೆಯೂ ಸಹ ಕರ್ತವ್ಯಕ್ಕೆ ಹಾಜರಾಗದೆ ತಮ್ಮ ಗೈರುಹಾಜರಿಯನ್ನು ಮುಂದುವರಿಸಿ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 17–3–2001 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ ದಿನಾಂಕ: 25–7–93 ರಿಂದ 04–3–94 ರವರೆಗಿನ ಅವಧಿಯನ್ನು ಸಂಬಳರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ), ಇವರು ಮೆಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15–3–2002ರ ಆದೇಶದಲ್ಲಿ ಮೇಲ್ಮನವಿಯಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 169 ಪೊಸಿಅ 2010, ಬೆಂಗಳೂರು, ದಿನಾಂಕ: 12–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಕೆ. ರಾಮಯ್ಯ, ಮಾಜಿ ಹೆಚ್.ಸಿ. ವಿಧಾನಸೌಧ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 266

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಟಿ. ರಾಮಯ್ಯ, ಪಿ.ಐ. ಜಿಲ್ಲಾ ಗುಪ್ತಶಾಖೆ, ಬೆಂಗಳೂರು ಜಿಲ್ಲೆ ಮತ್ತು ಶ್ರೀ ಸಿ.ವಿ. ಕೃಷ್ಣೇಗೌಡ ಹೆಚ್.ಸಿ. ವಿಕಾಸಸೌಧ ಭದ್ರತೆ, ಬೆಂಗಳೂರು, ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)/69/2006–07 ದಿನಾಂಕ: 15–10–2010
2) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30–11–2010 ಮತ್ತು 17–01–2011
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)/69/2006–07 ದಿನಾಂಕ: 28–02–2011

**ಪ್ರಸ್ತಾವನೆ :**

ಶ್ರೀ ಟಿ. ರಾಮಯ್ಯ, ಪಿ.ಐ. ಮತ್ತು ಶ್ರೀ ಸಿ.ವಿ. ಕೃಷ್ಣೇಗೌಡ ಹೆಚ್.ಸಿ. ಇವರುಗಳು ಈ ಹಿಂದೆ ಬೆಂಗಳೂರಿನ ಸಿದ್ದಾಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಧಿಕಾರ ದುರುಪಯೋಗ, ದುರ್ನಡತೆ ಹಾಗೂ ಕರ್ತವ್ಯಚ್ಯುತಿ ಎಸಗಿರುವ ಕಾರಣದ ಮೇಲೆ ಇವರುಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

**1)** ಶ್ರೀ ಟಿ. ರಾಮಯ್ಯ, ಪೊಲೀಸ್ ಇನ್‌ಸ್ಪೆಕ್ಟರ್ ಆದ ನೀವು ದಿ: 02–02–2007 ರಂದು ನೀವು ಪಿರ್ಯಾದಿದಾರರಾದ ರಮೇಶ್ ಭಟ್‌ರವರಿಂದ ನೆರಳು ಸಾಕ್ಷಿ ಸಮಕ್ಷಮದಲ್ಲಿ 50,000 ಲಂಚದ ಹಣವನ್ನು ಕೇಳಿದ್ದು ಪಿರ್ಯಾದಿದಾರರು ಅಷ್ಟು ಹಣ ಇರುವುದಿಲ್ಲವೆಂದು ತಿಳಿಸಿದ್ದು ಮುಂಗಡವಾಗಿ ರೂ. 10,000–00 ಗಳನ್ನು ನೀಡುವುದಾಗಿ ತಿಳಿಸಿದ್ದು ಅದರಂತೆ ಪಿರ್ಯಾದಿದಾರರು ಹಣವನ್ನು ಕೊಡಲು ಬಂದಾಗ ನಿಮ್ಮ ಠಾಣೆಯ ಹೆಚ್.ಸಿ. 1193 ಶ್ರೀ ಸಿ.ವಿ. ಕೃಷ್ಣೇಗೌಡರವರನ್ನು ಕರೆದು ಅವರ ಕೈಯಲ್ಲಿ ಹಣವನ್ನು ಕೊಡುವಂತೆ ತಿಳಿಸಿದ್ದರ ಮೇರೆಗೆ ಹಣವನ್ನು ಕೃಷ್ಣೇಗೌಡರು ಪಿರ್ಯಾದಿದಾರರಿಂದ ಪಡೆದುಕೊಂಡಾಗ ಲೋಕಾಯುಕ್ತ ಟ್ರಾಪ್ ಬಲೆಗೆ ಸಿಕ್ಕಿ ಬಿದ್ದಿರುತ್ತಾರೆ."

2) ಹೆಚ್.ಸಿ. 1193 ಸಿ.ವಿ. ಕೃಷ್ಣೇಗೌಡ ಆದ ನೀವು ಸಿದ್ದಾಪುರ ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುತ್ತಿದ್ದ ಸಮಯದಲ್ಲಿ ಪಿರ್ಯಾದಿದಾರರಾದ ಶ್ರೀ ರಮೇಶ್ ಭಟ್ ರವರ ವಿರುದ್ಧ ನಿಮ್ಮ ಠಾಣೆಯಲ್ಲಿ ದಾಖಲಾಗಿದ್ದ ಮೊ.ಸಂ. 255/2006 ಕಲಂ 419 ಐ.ಪಿ.ಸಿ. ಪ್ರಕರಣದಲ್ಲಿ ನಿಮ್ಮ ಠಾಣೆಯ ಪೊಲೀಸ್ ಇನ್ಸ್ ಪೆಕ್ಟರ್‌ರವರಾದ ಶ್ರೀ ಟಿ. ರಾಮಯ್ಯನವರು ಹೇಳಿದಂತೆ ದಿ: 02–02–2007 ರಂದು ನೆರಳು ಸಾಕ್ಷಿ ಸಮಕ್ಷಮ ಪಿರ್ಯಾದಿದಾರರಾದ ಶ್ರೀ ರಮೇಶ್ ಭಟ್ ರವರಿಂದ 10,000/– ರೂ.ಗಳನ್ನು ಪಡೆದುಕೊಂಡ ಬಗ್ಗೆ ಪಿರ್ಯಾದಿದಾರರ ಮತ್ತು ನೆರಳು ಸಾಕ್ಷಿದಾರರ ಹೇಳಿಕೆಗಳಿಂದ ಮತ್ತು ರಸಾಯನಿಕ ತಜ್ಞರ ವರದಿಯಿಂದ ಹಾಗೂ ತನಿಖೆಯ ಸಮಯದಲ್ಲಿ ಸಂಗ್ರಹಿಸಿದ ದಾಖಲೆಗಳಿಂದ ಕಂಡುಬಂದಿರುತ್ತೆ"

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪವು ಸಾಕ್ಷ್ಯಾಧಾರಗಳ ಕೊರತೆಯಿಂದ ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿದ್ದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 15–10–2010ರ ಆದೇಶದಲ್ಲಿ ಅರ್ಜಿದಾರರುಗಳು ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯಲ್ಲಿ ಒಂದು ಹಂತಕ್ಕೆ ಒಂದು ವರ್ಷಗಳವರೆಗೆ ಇಳಿಸಲಾಗಿದೆ. ದಂಡನೆಯ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಗಳಾಗಲಿ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ. ದಂಡನಾವಧಿ ಪೂರ್ಣಗೊಂಡ ನಂತರ ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನದಿಂದ ವಾರ್ಷಿಕ ವೇತನ ಬಡ್ತಿಗಳನ್ನು ನೀಡತಕ್ಕದ್ದು, ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 189 ಪೊಸಿಅ 2010, ಬೆಂಗಳೂರು, ದಿನಾಂಕ: 12-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ. ರಾಮಯ್ಯ, ಪಿ.ಐ. ಗುಪ್ತಶಾಖೆ, ಬೆಂಗಳೂರು ಜಿಲ್ಲೆ ಮತ್ತು ಸಿ.ವಿ. ಕೃಷ್ಣೇಗೌಡ ಹೆಚ್.ಸಿ. ವಿಕಾಸಸೌಧ ಭದ್ರತೆ, ಬೆಂಗಳೂರು, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 267

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಪಾಂಡವಪುರ ಇವರನ್ನು ಕ್ರಿಮಿನಲ್ ಆರೋಪದ ಮೇಲೆ ಸೇವೆಯಿಂದ ವಜಾ ಮಾಡುವ ಕುರಿತು.

**ಓದಲಾಗಿದೆ:**

1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಪಿಎನ್/ಸಿಶಾ-1/133/2005-2006, ದಿನಾಂಕ: 18.08.2005.
2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಎನ್/ಸಿಶಾ-1/133/2005-2006, ದಿನಾಂಕ 29.03.2006.
3) ಸರ್ಕಾರದ ಆದೇಶ ಸಂಖ್ಯೆ: ಒಇ 791 ಪಿಪಿಇ 2005, ದಿನಾಂಕ: 23.06.2007 ಮತ್ತು ತಿದ್ದುಪಡಿ ದಿನಾಂಕ 15.11.2007.
4) ಸರ್ಕಾರದ ಆದೇಶ ಸಂಖ್ಯೆ: ಒಇ 200 ಪಿಪಿಇ 2009, ದಿನಾಂಕ: 02.05.2009
5) ದಿನಾಂಕ 03.05.2011 ರಂದು ಮಾನ್ಯ ವಿಶೇಷ ನ್ಯಾಯಾಧೀಶರು ಹಾಗೂ 3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಸ್ಪೆಷಲ್ ಕೇಸ್ ಸಂಖ್ಯೆ: 7/2008ರಲ್ಲಿ ತೀರ್ಪು.
6) ದಿನಾಂಕ 30.05.2011 ರಂದು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಅಪೀಲು ಸಂಖ್ಯೆ: 547/2011 ರಲ್ಲಿ ಮಧ್ಯಂತರ ಆದೇಶ.
7) ದಿನಾಂಕ 20.07.2011ರಂದು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಅಪೀಲು ಸಂಖ್ಯೆ: 547/2011 ರಲ್ಲಿ ಆದೇಶ.
8) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ/1ಎ/133/ 2005-06, ದಿನಾಂಕ 08.06.2011.
9) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ಸಂಖ್ಯೆ: ಡಿಪಿಎಆರ್ 9 ಸೇಇವಿ 95, ದಿನಾಂಕ 26.06.1996.
10) ದಿನಾಂಕ 30.11.2011ರ ಸಚಿವ ಸಂಪುಟದ ಪ್ರಕರಣ ಸಂಖ್ಯೆ: ಸೆಡಿ/577/2011.

**ಪ್ರಸ್ತಾವನೆ :**

ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಪಾಂಡವಪುರ ಇವರು ಮೈಸೂರಿನ 3ನೇ ಅಧಿಕ ಸಿ.ಜೆ.ಎಂ ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಂಕ 10.08.2005ರಂದು ಮೈಸೂರು ನಜರ್‌ಬಾದ್ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 330/1993ರ ಪ್ರಕರಣದ ಪಿರ್ಯಾದುದಾರರಾದ ಶ್ರೀ ಬಷೀರ್ ಅಹಮದ್ ಖಾನ್ ಇವರಿಂದ ₹5,000/- ಗಳ ಲಂಚವನ್ನು ಪಡೆಯುತ್ತಿದ್ದಾಗ ಮೈಸೂರು ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿರುತ್ತಾರೆ. ಆದುದರಿಂದ ಇವರ ವಿರುದ್ಧ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ (1)ರ ಆದೇಶ ದಿನಾಂಕ 18.08.2005 ರಲ್ಲಿ ಇಲಾಖಾ ವಿಚಾರಣೆ ಬಾಕಿ ಇರಿಸಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿ ಇಟ್ಟಿದ್ದರು. ಮೇಲೆ ಓದಲಾದ (2) ರ ಆದೇಶದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಕೆ.ಎಸ್. ರವೀಂದ್ರಗೌಡ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ ಅವರ ಅಮಾನತ್ತಿನ ಆದೇಶವನ್ನು ರದ್ದುಗೊಳಿಸಿ ಕರ್ತವ್ಯಕ್ಕೆ ಪುನರ್ ನೇಮಿಸಿದ್ದರು.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ಎಸ್. ರವೀಂದ್ರಗೌಡ ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆಯನ್ನು ಹೂಡಲು ಲೋಕಾಯುಕ್ತ ಪೊಲೀಸರಿಗೆ ಅನುಮತಿಯನ್ನು ನೀಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ಎಸ್. ರವೀಂದ್ರಗೌಡ ಇವರ ವಿರುದ್ಧ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಮಾನ್ಯ ವಿಶೇಷ ನ್ಯಾಯಾಧೀಶರು ಹಾಗೂ 3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಸ್ಪೆಷಲ್ ಕೇಸ್ ಸಂಖ್ಯೆ: 7/2008ರಲ್ಲಿ ದಿನಾಂಕ 03.05.2011ರಂದು ಶ್ರೀ ಕೆ.ಎಸ್. ರವೀಂದ್ರಗೌಡ ಇವರಿಗೆ ಒಂದು ವರ್ಷದ ಕಠಿಣ ಸಜಾ ಹಾಗೂ ₹10,000/- ದಂಡವನ್ನು ವಿಧಿಸಿದ್ದು, ದಂಡವನ್ನು ಕಟ್ಟಲು ತಪ್ಪಿದಲ್ಲಿ ಮುಂದುವರೆದು 3 ತಿಂಗಳ ಸಾದಾ ಸಜೆಯನ್ನು ವಿಧಿಸಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ಮಾನ್ಯ ಉಚ್ಚ ನ್ಯಾಯಾಲಯದ ಅಪೀಲ್ ಸಂಖ್ಯೆ: 547/2011ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 30.05.2011ರಂದು ಮಧ್ಯಂತರ ಆದೇಶವನ್ನು ನೀಡಿತ್ತು.

ಮೇಲೆ (7)ರಲ್ಲಿ ಓದಲಾದ ಮಾನ್ಯ ಕರ್ನಾಟಕ ಉಚ್ಚ ನ್ಯಾಯಲಯವು ಅಪೀಲ ಸಂಖ್ಯೆ: 547/2011ರಲ್ಲಿ ದಿನಾಂಕ 20.07.2011ರಂದು " For the aforesaid reasons, the appeal is dismissed. The appellant shall surrender before the trial court to undergo the sentence imposed upon him and the trial court also shall take necessary steps in this regard". ಎಂದು ಆದೇಶ ನೀಡಿರುತ್ತದೆ. ಸದರಿ ಆದೇಶದ ಅನ್ವಯ ಶ್ರೀ ಕೆ.ಎಸ್. ರವೀಂದ್ರಗೌಡ ಇವರನ್ನು ದಿನಾಂಕ 15.09.2011 ರಂದು ಮೈಸೂರಿನ 3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ದಿನಾಂಕ 03.05.2011 ರ ಆದೇಶದಂತೆ ಮಾನ್ಯ ನ್ಯಾಯಾಧೀಶರು ಶ್ರೀ ಕೆ.ಎಸ್. ರವೀಂದ್ರಗೌಡ ಇವರನ್ನು ನ್ಯಾಯಾಂಗ ಬಂಧನಕ್ಕೆ ಆದೇಶಿಸಿದ್ದು, ಅದರಂತೆ ಸದರಿಯವರನ್ನು ದಿನಾಂಕ 15.09.2011ರಂದು ಮೈಸೂರಿನ ಕೇಂದ್ರ ಕಾರಾಗೃಹದಲ್ಲಿ ಇರಿಸಲಾಗಿದೆ.

ಮೇಲೆ (8)ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಶ್ರೀ ಕೆ.ಎಸ್. ರವೀಂದ್ರಗೌಡ ಇವರು ಗ್ರೂಪ್–'ಬಿ' ಪತ್ರಾಂಕಿತ ಅಧಿಕಾರಿಯಾಗಿರುತ್ತಾರೆ. ಆದುದರಿಂದ ಇವರಿಗೆ ಶಿಕ್ಷೆ ವಿಧಿಸಿರುವ ದಿನಾಂಕದಿಂದ ಅಂದರೆ ದಿನಾಂಕ 03.05.2011 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ (9)ರಲ್ಲಿ ಓದಲಾದ ದಿನಾಂಕ 26.06.1996 ರ ಸುತ್ತೋಲೆಯಲ್ಲಿ **"**ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 14(1) ರ ಅನುಸಾರ ಸದರಿ ನಿಯಮಗಳ ನಿಯಮಗಳು 11, 12 ಮತ್ತು 13ರಲ್ಲಿ ಏನೇ ಹೇಳಲಾಗಿದ್ದರೂ ಕ್ರಿಮಿನಲ್ ನ್ಯಾಯಾಲಯದ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ದಿಯಾದ ಸರ್ಕಾರಿ ನೌಕರರನ್ನು ಪುನಃ ಇಲಾಖಾ ವಿಚಾರಣೆಗೆ ಒಳಪಡಿಸದೆಯೇ ಸೇವೆಯಿಂದ ವಜಾ ಮಾಡುವುದು ಅಥವಾ ತೆಗೆದುಹಾಕುವ ಅಥವಾ ಕೆಳದರ್ಜೆಗೆ ಇಳಿಸುವ ದಂಡನೆಯನ್ನು ವಿಧಿಸಬಹುದಾಗಿದೆ. ಈ ನಿಯಮದ ಅವಕಾಶವು ಸಂವಿಧಾನದ 311(2)ರ ಬೆಂಬಲ ಪಡೆದಿದೆ**"** ಎಂಬುದಾಗಿ ಉಲ್ಲೇಖಿಸಲಾಗಿದೆ.

ಮೇಲೆ (10) ರಲ್ಲಿ ಓದಲಾದ ದಿನಾಂಕ 30.11.2011 ರಂದು ನಡೆದ ಸಚಿವ ಸಂಪುಟದ ಸಭೆಯಲ್ಲಿ ಪ್ರಕರಣದ ವಿಷಯ ಸಂಖ್ಯೆ: ಸಿ/577/2011 ರಲ್ಲಿ ಸಚಿವ ಸಂಪುಟ ಟಿಪ್ಪಣಿಯ ಖಂಡಿಕೆ 11ರಲ್ಲಿ ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಪಾಂಡವಪುರ ಇವರು ಕ್ರಿಮಿನಲ್ ಅಪರಾಧ ಎಸಗಿರುವ ಕಾರಣಕ್ಕೆ ಮಾನ್ಯ ವಿಶೇಷ ನ್ಯಾಯಾಧೀಶರು ಹಾಗೂ 3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರ ಅದೇಶ ದಿನಾಂಕ 03.05.2011 ರಲ್ಲಿ ಇವರಿಗೆ ಒಂದು ವರ್ಷದ ಕಠಿಣ ಸಜಾ ಹಾಗೂ ₹10,000/– ದಂಡವನ್ನು ವಿಧಿಸಿದ್ದು, ದಂಡವನ್ನು ಕಟ್ಟಲು ತಪ್ಪಿದಲ್ಲಿ ಮುಂದುವರೆದು 3 ತಿಂಗಳ ಸಾದಾ ಸಜೆಯನ್ನು ವಿಧಿಸಿರುವುದರಿಂದ, ಶ್ರೀ ಕೆ.ಎಸ್. ರವೀಂದ್ರಗೌಡ ಇವರನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8ರ ಉಪನಿಯಮ (viii) ರನ್ವಯ ಸರ್ಕಾರಿ ಸೇವೆಯಿಂದ ದಿನಾಂಕ 03.05.2011 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲು ಸಚಿವ ಸಂಪುಟ ಸಮಿತಿಯು ಅನುಮೋದನೆ ನೀಡಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 222 ಪಿಪಿಇ 2011, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಪಾಂಡವಪುರ, ಇವರನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8ರ ಉಪನಿಯಮ (viii) ರನ್ವಯ ದಿನಾಂಕ 03.05.2011 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–'ಬಿ')

ಪಿ.ಆರ್. 268

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 30 ಪ್ರಥಮ ದರ್ಜೆ ಸಹಾಯಕರ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ:ಲಾ 130 ಎಲ್ಎಜಿ 79, ದಿನಾಂಕ: 07.10.1980
2) ಸರ್ಕಾರದ ಆದೇಶ ಸಂ:ಲಾ 16 ಎಲ್ಸಿಇ 90, ದಿನಾಂಕ: 26.08.1993
3) ಸರ್ಕಾರದ ಆದೇಶ ಸಂ:ಲಾ 111 ಎಲ್ಸಿಇ 93, ದಿನಾಂಕ: 08.04.1994
4) ಸರ್ಕಾರದ ಆದೇಶ ಸಂ.ಲಾ 18 ಎಲ್ಸಿಇ 97(vol-II), ದಿನಾಂಕ: 04.05.2000
5) ಸರ್ಕಾರದ ಆದೇಶ ಸಂ:ಒಇ 428 ಪಿಪಿಇ 2010, ದಿನಾಂಕ: 13.07.2011
6) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಕೇಂಸ/ವಿವ/31/2011–12, ದಿನಾಂಕ: 07.07.2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 07.10.1980ರ ಸರ್ಕಾರದ ಆದೇಶದನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ನಿರ್ದೇಶಕರ ಹಾಗೂ ಸರ್ಕಾರಿ ಅಭಿಯೋಜಕರುಗಳ ಕಛೇರಿಗಳಿಗೆ ಹೊಂದಿಕೊಂಡಂತೆ 21 ಪ್ರಥಮ ದರ್ಜೆ ಸಹಾಯಕರುಗಳ, ಮೇಲೆ (2)ರಲ್ಲಿ ಓದಲಾದ ದಿನಾಂಕ: 26.08.1993ರ ಸರ್ಕಾರದ ಆದೇಶದನ್ವಯ ಗುಲ್ಬರ್ಗಾದ ವಿಶೇಷ ನ್ಯಾಯಾಲಯ (ಪ.ಜಾ. ಮತ್ತು ಪ.ಪಂ.)ದ ಸರ್ಕಾರಿ ಅಭಿಯೋಜಕರ ಕಛೇರಿಗೆ ಹೊಂದಿಕೊಂಡಂತೆ 01 ಪ್ರಥಮ ದರ್ಜೆ ಸಹಾಯಕರ ಮೇಲೆ (3)ರಲ್ಲಿ ಓದಲಾದ ದಿನಾಂಕ: 08.04.1994ರ ಸರ್ಕಾರದ ಆದೇಶದನ್ವಯ ಬೆಂಗಳೂರು, ಮೈಸೂರು ಮತ್ತು ಮಂಗಳೂರಿನ ವಿಶೇಷ ನ್ಯಾಯಾಲಯ (ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ)ದ ಸರ್ಕಾರಿ ಅಭಿಯೋಜಕರ ಕಛೇರಿಗೆ ಹೊಂದಿಕೊಂಡ 03 ಪ್ರಥಮ ದರ್ಜೆ ಸಹಾಯಕರುಗಳ ಮೇಲೆ (4)ರಲ್ಲಿ ಓದಲಾದ ದಿನಾಂಕ: 04.05.2000ರ ಸರ್ಕಾರದ

ಆದೇಶದನ್ವಯ ನೂತನ ಜಿಲ್ಲೆಗಳಾದ ಗದಗ, ಹಾವೇರಿ, ಬಾಗಲಕೋಟೆ, ದಾವಣಗೆರೆ ಮತ್ತು ಕೊಪ್ಪಳಗಳ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳ ಸರ್ಕಾರಿ ಅಭಿಯೋಜಕರ ಕಛೇರಿಗೆ ಹೊಂದಿಕೊಂಡ 05 ಪ್ರಥಮ ದರ್ಜೆ ಸಹಾಯಕರುಗಳ, ಹೀಗೆ ಒಟ್ಟು 30 ಪ್ರಥಮ ದರ್ಜೆ ಸಹಾಯಕರುಗಳ ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ: 13.07.2011ರ ಸರ್ಕಾರದ ಆದೇಶದನ್ವಯ ಮೇಲೆ (1), (2), (3) ಮತ್ತು (4)ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಸೃಜಿಸಿ, ಕಾಲ-ಕಾಲಕ್ಕೆ ಮುಂದುವರಿಸಿಕೊಂಡು ಬಂದಿರುವ 30 ಪ್ರಥಮ ದರ್ಜೆ ಸಹಾಯಕರ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 31.03.2012ರ ಮುಂದುವರೆಸಲಾಗಿದೆ.

ಮೇಲೆ (6)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 07.07.2011ರ ಪತ್ರದಲ್ಲಿ ಇಲಾಖೆಯಲ್ಲಿನ 44 ತಾತ್ಕಾಲಿಕ ಹುದ್ದೆಗಳಲ್ಲಿ ಮೇಲೆ (1), (2), (3) ಮತ್ತು (4)ರಲ್ಲಿ ಓದಲಾದ ಸರ್ಕಾರ ಆದೇಶಗಳನ್ವಯ ಸೃಜಿಸಿ, ಕಾಲ-ಕಾಲಕ್ಕೆ ಮುಂದುವರಿಸಿಕೊಂಡು ಬಂದು ಮೇಲೆ (5)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ದಿನಾಂಕ: 31.03.2012ರ ಮುಂದುವರೆಸಲಾಗಿರುವ 30 ಪ್ರಥಮ ದರ್ಜೆ ಸಹಾಯಕರ ತಾತ್ಕಾಲಿಕ ಹುದ್ದೆಗಳು ಇಲಾಖೆಯ ದೈನಂದಿನ ಆಡಳಿತಾತ್ಮಕ ಕಾರ್ಯದ ದೃಷ್ಟಿಯಿಂದ ಅತಿ ಅವಶ್ಯಕ ಹುದ್ದೆಗಳಾಗಿದ್ದು, ಇವುಗಳನ್ನು ಇಲಾಖೆಯ ಹಿತದೃಷ್ಟಿಯಿಂದ ಖಾಯಂಗೊಳಿಸುವುದು ಅವಶ್ಯಕವಾಗಿದೆ. ಆದ್ದರಿಂದ, ಸದರಿ 30 ಪ್ರಥಮ ದರ್ಜೆ ಸಹಾಯಕರ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 298 ಪಿಪಿಇ 2011, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್, 2011**

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ, ಈ ಮುಂದಿನ ತಃಖ್ತೆಯ ಅಂಕಣ (2)ರಲ್ಲಿನ ಕಛೇರಿಗಳಿಗೆ ಹೊಂದಿಕೊಂಡಂತೆ, ಅಂಕಣ (3)ರಲ್ಲಿನ ಸರ್ಕಾರಿ ಆದೇಶಗಳನ್ವಯ ಸೃಜನೆಯಾದ 30 ಪ್ರಥಮ ದರ್ಜೆ ಸಹಾಯಕರುಗಳ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಿದೆ.

| ಕ್ರ. ಸಂ. | ಹುದ್ದೆ ಮಂಜೂರಾಗಿರುವ ಕಛೇರಿ | ಹುದ್ದೆ ಸೃಜನೆಯಾದ ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|
| 1 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 2 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 3 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಗ್ರಾಮಾಂತರ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 4 | ಸರ್ಕಾರಿ ಅಭಿಯೋಜಕರ ಕಛೇರಿ, ತುಮಕೂರು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 5 | ಸರ್ಕಾರಿ ಅಭಿಯೋಜಕರ ಕಛೇರಿ, ಕೋಲಾರ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 6 | ಸರ್ಕಾರಿ ಅಭಿಯೋಜಕರ ಕಛೇರಿ, ಮೈಸೂರು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 7 | ಸರ್ಕಾರಿ ಅಭಿಯೋಜಕರ ಕಛೇರಿ, ಮಂಡ್ಯ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 8 | ಸರ್ಕಾರಿ ಅಭಿಯೋಜಕರ ಕಛೇರಿ, ಹಾಸನ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 9 | ಸರ್ಕಾರಿ ಅಭಿಯೋಜಕರ ಕಛೇರಿ, ಕೊಡಗು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 10 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಳಗಾಂ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 11 | ಸರ್ಕಾರಿ ಅಭಿಯೋಜಕರ ಕಛೇರಿ, ಧಾರವಾಡ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 12 | ಸರ್ಕಾರಿ ಅಭಿಯೋಜಕರ ಕಛೇರಿ, ಬಿಜಾಪುರ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 13 | ಸರ್ಕಾರಿ ಅಭಿಯೋಜಕರ ಕಛೇರಿ, ಗುಲ್ಬರ್ಗಾ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 14 | ಸರ್ಕಾರಿ ಅಭಿಯೊಜಕರ ಕಛೇರಿ, ಬೀದರ್ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 15 | ಸರ್ಕಾರಿ ಅಭಿಯೋಜಕರ ಕಛೇರಿ, ರಾಯಚೂರು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 16 | ಸರ್ಕಾರಿ ಅಭಿಯೋಜಕರ ಕಛೇರಿ, ಚಿತ್ರದುರ್ಗ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 17 | ಸರ್ಕಾರಿ ಅಭಿಯೋಜಕರ ಕಛೇರಿ, ಶಿವಮೊಗ್ಗ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 18 | ಸರ್ಕಾರಿ ಅಭಿಯೋಜಕರ ಕಛೇರಿ, ಬಳ್ಳಾರಿ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 19 | ಸರ್ಕಾರಿ ಅಭಿಯೋಜಕರ ಕಛೇರಿ, ಮಂಗಳೂರು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 20 | ಸರ್ಕಾರಿ ಅಭಿಯೋಜಕರ ಕಛೇರಿ, ಕಾರವಾರ | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 21 | ಸರ್ಕಾರಿ ಅಭಿಯೋಜಕರ ಕಛೇರಿ, ಚಿಕ್ಕಮಗಳೂರು | ಲಾ 130 ಎಲ್ಎಜಿ 79, ದಿನಾಂಕ: 07.10.1980. |
| 22 | ಸರ್ಕಾರಿ ಅಭಿಯೋಜಕರ ಕಛೇರಿ, ವಿಶೇಷ ನ್ಯಾಯಾಲಯ (ಎಸ್.ಸಿ./ಎಸ್.ಟಿ.), ಗುಲ್ಬರ್ಗ | ಲಾ 16 ಎಲ್ಸಿಇ 90, ದಿನಾಂಕ: 26.08.1993. |
| 23 | ಸರ್ಕಾರಿ ಅಭಿಯೋಜಕರ ಕಛೇರಿ, ವಿಶೇಷ ನ್ಯಾಯಾಲಯ (ಭ್ರಷ್ಟಚಾರ ನಿಯಂತ್ರಣ ಕಾಯ್ದೆ), ಬೆಂಗಳೂರು ನಗರ | ಲಾ 111 ಎಲ್ಸಿಇ 93, ದಿನಾಂಕ: 08.04.1994. |

ಶ್ರೀ ಮುತ್ತುರಾಜ್ ಆರ್. ಕಂದಗಲ್, ದ್ವಿತೀಯ ದರ್ಜೆ ಸಹಾಯಕರು, ಇವರ ವಿರುದ್ಧ ಮಾನ್ವಿ ಪೊಲೀಸ್ ಠಾಣೆ ಆರಕ್ಷಕ ಉಪ ನಿರೀಕ್ಷಕರು (ಕಾನೂನು ಸುವ್ಯವಸ್ಥೆ) ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ದಾಖಲಿಸಿದ್ದ ಅಪರಾಧ ಮೊಕದ್ದಮೆ ಸಂಖ್ಯೆ: 506/2006ಕ್ಕೆ ಸಂಬಂಧಿಸಿದಂತೆ ನ್ಯಾಯಾಲಯವು ದಿನಾಂಕ: 17-04-2006ರಂದು ನೀಡಿರುವ ಆದೇಶದಲ್ಲಿ ನೌಕರರು ಅಪರಾಧಿ ಎಂದು ಸಾಬೀತಾಗಿ ಬಂದೀಖಾನೆ ಶಿಕ್ಷೆಗೆ ಒಳಗಾದ್ದರಿಂದ ನೌಕರರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರೆಸುವ ಅಗತ್ಯವಿಲ್ಲವೆಂದು ತೀರ್ಪು ನೀಡಿದೆ.

ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಆದೇಶದಲ್ಲಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಮಾನ್ವಿಯ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ., ನ್ಯಾಯಾಲಯ ಶ್ರೀ ಮುತ್ತುರಾಜ್ ಆರ್. ಕಂದಗಲ್, ದ್ವಿತೀಯ ದರ್ಜೆ ಸಹಾಯಕರು ಇವರಿಗೆ ಭಾರತೀಯ ದಂಡ ಸಂಹಿತೆ (I.P.C.) 504, 324, 353ರಡಿ ಹಾಗೂ ಕ್ರಿಮಿನಲ್ ಸಂಹಿತೆ (C.R.P.C) 428 ರಲ್ಲಿ ದಂಡನೆ ವಿಧಿಸಿರುವುದರಿಂದ ಮತ್ತು ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇವಿ 95, ದಿನಾಂಕ: 26-06-1998ರನ್ವಯ ಸರ್ಕಾರಿ ಸೇವೆಯಲ್ಲಿ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ, ಶ್ರೀ ಮುತ್ತುರಾಜ್ ಆರ್. ಕಂದಗಲ್ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಗಳು, 1966ರ ನಿಯಮ 3(i)(ii)(iii)ರನ್ವಯ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (viii) ಮತ್ತು 14(i) ಪ್ರಕಾರ ಸರ್ಕಾರಿ ಸೇವೆಯಿಂದ ವಜಾಗೊಳಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (4)ರನ್ವಯ ಶ್ರೀ ಮುತ್ತುರಾಜ್ ಆರ್. ಕಂದಗಲ್ ಇವರು ದಿನಾಂಕ: 08-03-2011ರ ಆದೇಶದಲ್ಲಿ ಸೇವೆಯಿಂದ ವಜಾಗೊಳಿಸಿರುವುದನ್ನು ಪ್ರಶ್ನಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 18ರನ್ವಯ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿದ್ದು ಅದರಲ್ಲಿ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಿರುತ್ತಾರೆ.

(i) ಸಿ.ಸಿ.ಸಂಖ್ಯೆ, 506/2006 ಪ್ರಕರಣದಲ್ಲಿ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ., ನ್ಯಾಯಾಲಯ, ಮಾನ್ವಿ ದಿನಾಂಕ: 17-04-2010 ರಂದು ನೀಡಿರುವ ಆದೇಶದಲ್ಲಿ ಶಿಕ್ಷೆಗೆ ಗುರಿಪಡಿಸಿದ್ದು ಸದರಿ ಆದೇಶದ ವಿರುದ್ಧ ಪ್ರಧಾನ ಸೆಷನ್ಸ್ ನ್ಯಾಯಾಧೀಶರು, ರಾಯಚೂರು ಇಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ: 23/2006 ಸಲ್ಲಿಸಿದ್ದು ಈ ಸಂಬಂಧ ಮಾನ್ಯ ನ್ಯಾಯಾಲಯ ದಿನಾಂಕ: 10-05-2010 ರಂದು ನೀಡಿರುವ ಆದೇಶದಲ್ಲಿ ದಂಡನೆಯನ್ನು (Sentence) ಒಂದು ವರ್ಷದ ಅವಧಿಗೆ ತಡೆಹಿಡಿದಿರುತ್ತದೆ.

(ii) ದಿನಾಂಕ: 08-03-2011ರ ಆದೇಶದಲ್ಲಿ ಸೇವೆಯಿಂದ ವಜಾಗೊಳಿಸಿರುವುದು ಕಾನೂನುಬಾಹಿರವಾಗಿರುತ್ತದೆ.

(iii) ತಮ್ಮ ಹಾಗೂ ಮಾನ್ವಿ ಪಶುಆಸ್ಪತ್ರೆಯ ಪ್ರಭಾರಿ ಸಹಾಯಕ ನಿರ್ದೇಶಕರಾದ ಡಾ॥ ಶಂಕರ ಗುಳೇದಗುಡ್ಡ ನಡುವೆ ವೈಯಕ್ತಿಕ ಮೈಮನಸ್ಯ ಇರುತ್ತದೆ.

(iv) ದಿನಾಂಕ: 08-03-2011ರ ಕಛೇರಿ ಆದೇಶವು ವಿವರವಾದ ಆದೇಶವಾಗಿರುವುದಿಲ್ಲ.

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14(1)ರಲ್ಲಿ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನಡತೆಗಾಗಿ ದೋಷಾರೋಪಣೆಗಾಗಿ ಶಿಕ್ಷೆಗೆ ಒಳಪಟ್ಟಾಗ ಸದರಿ ನಿಯಮ 11 ಮತ್ತು 12ರಲ್ಲಿ ಏನೇ ಒಳಗೊಂಡಿದ್ದರೂ ಸಹ ಅಂತಹ ಸರ್ಕಾರಿ ನೌಕರನ ಮೇಲೆ ಇಲಾಖಾ ವಿಚಾರಣೆ ಮಾಡದೇ ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಈ ರೀತಿ ಪ್ರಕರಣದಲ್ಲಿ ಅನುಸರಿಸಬೇಕಾದ ಕ್ರಮ ಬಗ್ಗೆ ಸುತ್ತೋಲೆ ಸಂಖ್ಯೆ: ಡಿಪಿಎಆರ್ 9 ಎಸ್‌ಡಿಇ 95 ದಿನಾಂಕ: 26-06-1996 ಮತ್ತು ಡಿಪಿಎಆರ್ 8 ಎಸ್‌ಡಿಇ 2000(ಇ), ದಿನಾಂಕ: 29-08-2000ರಲ್ಲಿ ಸೂಚನೆಗಳನ್ನು ನೀಡಿದೆ.

ಶ್ರೀ ಮುತ್ತುರಾಜ್ ಆರ್. ಕಂದಗಲ್ ಇವರು ವಜಾ ಆದೇಶ ಪ್ರಶ್ನಿಸಿ ಸಲ್ಲಿಸಿರುವ ಮೇಲ್ಮನವಿಯನ್ನು ಸರ್ಕಾರ ಸಮಗ್ರವಾಗಿ ಪರಿಶೀಲಿಸಿದೆ. ಅಪೀಲುದಾರರು ಅಪರಾಧ ಪ್ರಕರಣ ಸಂಖ್ಯೆ C.C.No. 506/2006ರಲ್ಲಿ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ., ನ್ಯಾಯಾಲಯ, ಮಾನ್ವಿ ಅವರನ್ನು ದಂಡನೆಗೆ ಗುರಿಪಡಿಸಿದ್ದು ಸದರಿ ದಂಡನಾದೇಶದ ವಿರುದ್ಧ ಪ್ರಧಾನ ಸೆಷನ್ಸ್ ನ್ಯಾಯಾಧೀಶರು, ರಾಯಚೂರು ಇಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ: 23/2010ನ್ನು ಸಲ್ಲಿಸಿದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ದಿನಾಂಕ: 17-05-2010ರಂದು ನೀಡಿರುವ ಆದೇಶದಲ್ಲಿ ನ್ಯಾಯಾಲಯವು ಈ ಕೆಳಕಂಡಂತೆ ತಿಳಿಸಿದೆ.

> "that the impugned order on sentence stands suspended for period of one year or till disposal of this appeal……………….."

ಶ್ರೀ ಮುತ್ತುರಾಜ್ ಆರ್. ಕಂದಗಲ್ ಇವರು ಮೇಲ್ಮನವಿ ದಾಖಲಿಸಿದ್ದ ಪ್ರಧಾನ ಸೆಷನ್ಸ್ ನ್ಯಾಯಾಧೀಶರು, ರಾಯಚೂರು ಇಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ: 23/2010 ಇನ್ನೂ ನ್ಯಾಯಾಲಯದಲ್ಲಿ ಬಾಕಿ ಇದೆ. ಅಪೀಲುದಾರರನ್ನು ಅಧೀನ ನ್ಯಾಯಾಲಯ (ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ) ಶಿಕ್ಷೆಗೆ ಗುರಿಪಡಿಸಿದ್ದನ್ನು ಮೇಲಿನ ನ್ಯಾಯಾಲಯ ರದ್ದುಪಡಿಸಿರುವುದಿಲ್ಲ. ಕೇವಲ ದಂಡನಾದೇಶ ನಿಲಂಬಲನೆಯಲ್ಲಿಟ್ಟಿದೆ. ಆದ್ದರಿಂದ ಅಪೀಲುದಾರರು ತಮ್ಮನ್ನು ಎಲ್ಲಾ ಆರೋಪಗಳಿಂದ ನ್ಯಾಯಾಲಯ ಮುಕ್ತರನ್ನಾಗಿಸಿದೆ ಎನ್ನುವುದು ಸಮರ್ಪಕವಾಗಿರುವುದಿಲ್ಲ ಆದ್ದರಿಂದ, ಅಪೀಲುದಾರರ ವಾದದಲ್ಲಿ (Contention) ಹುರುಳಿರುವುದಿಲ್ಲ.

ನೇಮಕಾತಿ ಹಾಗೂ ಶಿಸ್ತು ಪ್ರಾಧಿಕಾರವಾದ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಅಪೀಲುದಾರರನ್ನು (ಶ್ರೀ ಮುತ್ತುರಾಜ್ ಆರ್. ಕಂದಗಲ್) ದಿನಾಂಕ: 08-03-2011 ರಂದು ಸೇವೆಯಿಂದ ವಜಾ ಮಾಡಿರುವ ದಂಡನಾದೇಶ ಕರ್ನಾಟಕ ನಾಗರೀಕ ಸೇವಾ ನಿಯಮಗಳು, ನಿಯಮ 14(1)ರ ಪ್ರಕಾರ ಇದೆ ಮತತು ಸುತ್ತೋಲೆ ಸಂಖ್ಯೆ: ಡಿಪಿಎಆರ್ 9 ಎಸ್‌ಡಿಇ 95, ದಿನಾಂಕ: 26-06-1996 ಹಾಗೂ ಡಿಪಿಎಆರ್ 8 ಎಸ್‌ಡಿಇ 2000-I ದಿನಾಂಕ: 29-08-2000 ಗಳನ್ವಯ ಇರುತ್ತದೆ. ಆದ್ದರಿಂದ ಅಪೀಲುದಾರರ ವಾದದಲ್ಲಿ ಹುರುಳಿರುವುದಿಲ್ಲ.

ಅಪೀಲುದಾರರಿಗೆ ಮಾನ್ವಿಯ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ., ನ್ಯಾಯಾಲಯ ಭಾರತೀಯ ದಂಡ ಸಂಹಿತೆ I.P.C 504, 324, 353ರಡಿ ಹಾಗೂ ಕ್ರಿಮಿನಲ್ ಸಂಹಿತೆ C.R.P.C. 428ರಲ್ಲಿ ದಂಡನೆ ವಿಧಿಸಿದ್ದು, ಅದನ್ನು ಅಪೀಲುದಾರರು ಅನುಭವಿಸಿರುತ್ತಾರೆ ಈ ರೀತಿ ಪ್ರಕರಣಗಳಲ್ಲಿ ವಿವರವಾದ ಆದೇಶ ಹೊರಡಿಸುವ ಅಗತ್ಯವಿರುವುದಿಲ್ಲ. ಅಪೀಲುದಾರರಿಗೆ ಮಾನ್ವಿಯ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ., ನ್ಯಾಯಾಲಯ ಶಿಕ್ಷೆ ವಿಧಿಸಿದ್ದು ಅದನ್ನು ರಾಯಚೂರಿನ ಪ್ರಧಾನ ಸೆಷನ್ಸ್ ನ್ಯಾಯಾಲಯ ತಡೆಹಿಡಿದಿದ್ದು ಸದರಿ ಪ್ರಕರಣ ಇನ್ನೂ ಬಾಕಿ ಇರುವುದರಿಂದ ಅಪೀಲುದಾರರು ಆರೋಪದಿಂದ ಸಂಪೂರ್ಣ ಮುಕ್ತರಾಗಿಲ್ಲ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರವು

ಶ್ರೀ ಮುತ್ತುರಾಜ್ ಆರ್. ಕಂದಗಲ್ ಇವರನ್ನು ಸೇವೆಯಿಂದ ವಜಾಗೊಳಿಸಿರುವ ಆದೇಶ ಸ್ಥಿರೀಕರಿಸಲು ಮತ್ತು ಅವರು ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 124 ಪಅವಿ 2011, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಕಛೇರಿ ಆದೇಶ ಸಂಖ್ಯೆ: ಆಪಸಂ/ಜಾಗೃತ/ವಿವ-12/2006-2007, ದಿನಾಂಕ: 08-03-2011ರಲ್ಲಿ ಶ್ರೀ ಮುತ್ತುರಾಜ್ ಆರ್. ಕಂದಗಲ್, ದ್ವಿತೀಯ ದರ್ಜೆ ಸಹಾಯಕರು, ಪಶು ಆಸ್ಪತ್ರೆ, ಬ್ಯಾಗವಾಟ, ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ ಇವರನ್ನು ಸೇವೆಯಿಂದ ವಜಾ ಮಾಡಿರುವ ಆದೇಶವನ್ನು ಸ್ಥಿರೀಕರಿಸಿ ಅದನ್ನು ಎತ್ತಿಹಿಡಿದಿರುವುದಲ್ಲದೆ ಸದರಿ ವಜಾ ಆದೇಶವನ್ನು ಪ್ರಶ್ನಿಸಿ ಶ್ರೀ ಮುತ್ತುರಾಜ್ ಆರ್. ಕಂದಗಲ್‌ರವರು ದಿನಾಂಕ: 03-06-2011ರಂದು ಸರ್ಕಾರಕ್ಕೆ ಸಲ್ಲಿಸಿದ್ದ (Appeal) ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪೀಠಾಧಿಕಾರಿ-2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ-ಎ)

ಪಿ.ಆರ್. 304

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಹಾವೇರಿ ತಾಲ್ಲೂಕ ಎಕ್ಕುಂಬಿ – ಮೊಳಕಾಲ್ಮೂರ ರೈಲು ಮಾರ್ಗದಲ್ಲಿನ ಎಲ್‌ಸಿ ಸಂಖ್ಯೆ: 237ರ ಬದಲಾಗಿ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಲೋಇ 30 ಸಿಬಿಆರ್ 2010 ದಿನಾಂಕ: 04-08-2010.
2) ಸರ್ಕಾರದ ಆದೇಶ ಸಂಖ್ಯೆ: ಲೋಇ 222, ಸಿಎನ್‌ಹೆಚ್ 2010 ದಿನಾಂಕ: 16-11-2010.
3) ಸರ್ಕಾರದ ಆದೇಶ ಸಂಖ್ಯೆ: ಮೂಅಇ 122 ರಾರಾಹೆ 2009, ಬೆಂಗಳೂರು, ದಿನಾಂಕ: 16-07-2011.
4) ಸರ್ಕಾರದ ಆದೇಶ ಸಂಖ್ಯೆ: ಮೂಅಇ 122 ರಾರಾಹೆ 2009, ಬೆಂಗಳೂರು, ದಿನಾಂಕ: 30-08-2011.
5) ಸರ್ಕಾರದ ಪತ್ರ ಸಂಖ್ಯೆ: ಮೂಅಇ 112 ರಾರಾಹೆ 2009, ಬೆಂಗಳೂರು, ದಿನಾಂಕ: 23-09-2011.
6) ಪತ್ರ ಸಂ: ಕಾನಿಇಂ/ ಲೋಇಹಾ/ಲೋಇ/ ಭೂಸ್ವಾ/ ಎಬಿ-4/ 2011-12/ 2313 ದಿನಾಂಕ : 21-09-2011 ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಹಾವೇರಿ ಇವರಿಂದ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಹಾವೇರಿ ತಾಲ್ಲೂಕ ಎಕ್ಕುಂಬಿ – ಮೊಳಕಾಲ್ಮೂರ ರೈಲು ಮಾರ್ಗದಲ್ಲಿ ಬರುವ ಎಲ್‌ಸಿ ಸಂಖ್ಯೆ: – 237 ರ ಬದಲಾಗಿ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣಕ್ಕೆ ಮೆ. ರೈಟ್ಸ್ ಸಂಸ್ಥೆಯು ತಯಾರಿಸಿರುವ ರೂ. 23.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಹಾಗೂ ರೇಲ್ವೆ ಮಂತ್ರಾಲಯ ಶೇಕಡ 50: 50 ರಷ್ಟು ವೆಚ್ಚವನ್ನು ಭರಿಸುವ ಷರತ್ತಿಗೊಳಪಟ್ಟು ಲೋಕೋಪಯೋಗಿ ಇಲಾಖೆಯು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

2. ಮೇಲೆ ಓದಲಾದ ಕ್ರ. ಸಂ. (2)ರ ಆದೇಶದಲ್ಲಿ ಲೋಕೋಪಯೋಗಿ ಇಲಾಖೆಯು ಕಾಮಗಾರಿಯನ್ನು ರೂ. 22.01 ಕೋಟಿಗಳಿಗೆ ಗುತ್ತಿಗೆಯನ್ನು ಗುತ್ತಿಗೆದಾರರಾದ ಶ್ರೀ ರಾಜಣ್ಣ ಶಿವಕುಮಾರ್, ಇವರಿಗೆ ವಹಿಸಿದೆ.

3. ಮೇಲೆ ಓದಲಾದ ಕ್ರ.ಸಂ. 3 ಮತ್ತು 4 ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ರೂ. 500.00 ಮತ್ತು 300.00 ಲಕ್ಷಗಳನ್ನು ಒಟ್ಟು ರೂ. 800.00 ಲಕ್ಷಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಹಾವೇರಿ ಇವರಿಗೆ ಬಿಡುಗಡೆ ಮಾಡಲಾಗಿದೆ.

4. ಮೇಲೆ ಓದಲಾದ ಕ್ರ.ಸಂ. (5)ರ ಸರ್ಕಾರದ ಪತ್ರದಲ್ಲಿ ಮುಖ್ಯ ಅಭಿಯಂತರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಸಂಪರ್ಕ ಮತ್ತು ಕಟ್ಟಡ (ಉ), ಧಾರವಾಡ ಇವರಿಗೆ ಬರೆದಿರುವ ಪತ್ರದಲ್ಲಿ ಎಲ್.ಸಿ. ಸಂ. 237 ರ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣಕ್ಕೆ ಬಿಡುಗಡೆಗೊಳಿಸಿರುವ ಅನುದಾನದಲ್ಲಿ ಯಾವ ಯಾವ ಕಾಮಗಾರಿಗೆ ಎಷ್ಟು ಮೊತ್ತ ವೆಚ್ಚ ಮಾಡಿರುವ ವಿವರಗಳು ಹಾಗೂ ಕಾಮಗಾರಿಯು ಭೌತಿಕ ಪ್ರಗತಿಯ ಪೂರ್ಣ ವಿವರಗಳನ್ನು ಕಳುಹಿಸುವಂತೆ ಕೋರಲಾಗಿತ್ತು. ಆದರೆ ಮುಖ್ಯ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಸಂಪರ್ಕ ಮತ್ತು ಕಟ್ಟಡ (ಉ), ಧಾರವಾಡ ಇವರಿಂದ ಮಾಹಿತಿ ಸ್ವೀಕೃತವಾಗಿಲ್ಲ.

5. ಮೇಲೆ ಓದಲಾದ ಕ್ರ.ಸಂ. (6)ರ ಪತ್ರದಲ್ಲಿ ಕಾರ್ಯನಿರ್ವಾಹಕ, ಇಂಜನಿಯರ್, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಹಾವೇರಿ, ಇವರು ದಿನಾಂಕ: 16-07-2011ರ ಸರ್ಕಾರದ ಆದೇಶದಲ್ಲಿ ಬಿಡುಗಡೆ ಮಾಡಿದ ರೂ. 300.00 ಲಕ್ಷಗಳ ಅನುದಾನದಲ್ಲಿ ಭೂಸ್ವಾಧೀನ ವೆಚ್ಚಕ್ಕೆ 108.10 ಲಕ್ಷ ಹಾಗೂ ಕಾಮಗಾರಿ ವೆಚ್ಚ ರೂ. 191.74 ಲಕ್ಷಗಳು ಮತ್ತು ಜಾಹೀರಾತು ವೆಚ್ಚ ರೂ. 0.16 ಲಕ್ಷಗಳು ಖರ್ಚು ಮಾಡಲಾಗಿದೆಯೆಂದು ಮತ್ತು ಕಾಮಗಾರಿಯು ಪ್ರಗತಿಯಲ್ಲಿದ್ದು ವಿದ್ಯುತ್, ಒಳಚರಂಡಿ, ಮಾರ್ಗ ಬದಲಾವಣೆ ಮತ್ತು ಗುತ್ತಿಗೆದಾರರಿಗೆ ಬಿಲ್ಲನ್ನು ಪಾವತಿಸುವ ಸಲುವಾಗಿ ಒಟ್ಟು 400.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

6. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 122 ರಾರಾಹೆ 2009, ಬೆಂಗಳೂರು, ದಿನಾಂಕ 15–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾವೇರಿ ತಾಲ್ಲೂಕ ಎಕ್ಕುಂಬಿ–ಮೊಳಕಾಲ್ಮೂರ ರೈಲು ಮಾರ್ಗದಲ್ಲಿ ಬರುವ ಎಲ್‌ಸಿ ಸಂಖ್ಯೆ: 237ರ ಬದಲಾಗಿ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತದ ಶೇಕಡ 50ರಷ್ಟು ಮೊತ್ತದಲ್ಲಿ ರೂ. 77.20 ಲಕ್ಷಗಳನ್ನು (ಎಪ್ಪತ್ತೇಳು ಲಕ್ಷ ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) 2011–12 ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465–01–190–3–04– (ಯೋಜನೆ)–211–ಕೆ–ರೈಡ್ ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಿಸಿರುವ ರೂ. 21.49 ಕೋಟಿಗಳಿಂದ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಹಾವೇರಿ ವಿಭಾಗ, ಹಾವೇರಿ ಇವರಿಗೆ ಬಿಡುಗಡೆ ಮಾಡಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಹಾವೇರಿ ವಿಭಾಗ, ಇವರು ಪೇಯಿಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇವರಿಂದ ಪಡೆಯಲು ಅನುಮತಿಸಿದೆ.

3. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಹಾವೇರಿ ವಿಭಾಗ, ಹಾವೇರಿ ಇವರು ಕಾಮಗಾರಿಯ ಭೌತಿಕ ಪ್ರಗತಿಯ ವಿವರಗಳು/ಅನುದಾನದ ವೆಚ್ಚದ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಸಂಖ್ಯೆ: FD 1595 EXP. 1/2011 ದಿನಾಂಕ : 05–12–2011 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 305

## HEALTH AND FAMILY WELFARE SECRETARIAT

**Sub :** Procurement of MS Office standard 2010 and antivirus Software-reg.

**Read :** Govt., Order No. HFW/KHSDRP/Comp. to PHCS & CHCs/17/09-10, 07-10-2011.

**2.** Proceedings of the 27th meeting of the Programme Steering Committee dt: 09-11-2011.

**3.** Letter of Wipro dated : 16-09-2011.

**Preamble:**

In the Government Order read at (1), above sanction was accorded for procurement of 1133 Nos. of Desktops, Printers and Ups to PHCs and CHCs at a total cost of Rs. 4,17,45,384-00 from M/s Wipro Infotech, Bangalore. For the computers so procured, it is proposed to supply MS Office and antivirus.

Therefore, an IFB was issued under NCB on 17-06-2011 for the procurement of MS Office & Antivirus software, Bids received for antivirus were evaluated and during the evaluation the inspection team who visited the factory of M/s Wipro Ltd., Kotdwar-Uttarkand has reported that the Antivirus which was preloaded in the desktops has one year validity. Hence, it was recommended to reject the bids received and drop the procurement of Antivirus.

The bids received for the procurement of MS Office Standard 2010 Software was evaluated. M/s Wipro Infotech, Bangalore had quoted Rs. 10,106-00 as unit price and later offered a discount and finally agreed to supply the goods at Rs. 9,656-00 per unit price.

The Secretary, Health and family Welfare Department and Chairman, Programme Steering Committee has approved the proposal on file subject to the ratification by the PSC. The Subject was placed before the steering committee (PSC) meeting held on 09-11-2011. After detail discussion the committee ratified the action taken on procurement of MS Office Standard 2010.

Hence, the following Order.

**Government Order No. HFW/KHSDRP/MS Office & NA/26/10-11, Bangalore, dated 31-12-2011**

Under the circumstences mentioned in the preamble, Government are pleased to accord sanction for Procurement of MS Office Standard 2010, at a total cost of Rs. 1,09.40.248-00 (Rupees one crore nine lakhs forty thousand two hundred and fortyeight only) from Ms/ Wipro Infotech, Bangalore.

By Order and in the name of the Governor of Karnataka

**K.N. Ramesh**

Deputy Secretary to Govt (I/c)

KHSDRP

Health & Famliy Welfare Department

P.R. 306

## HEALTH AND FAMILY WELFARE SECRETARIAT

**Sub :** Leave and TA/DA allowance to KHSDRP consultants –reg.

**Read :** 1) Proceedings of the 26th meeting of the Programme Steering Committee dt: 22-06-2011.

**2.** Proceedings of the 27th meeting of the Programme Steering Committee dt: 09-11-2011.

**Preamble:**

The leave, TA/DA allowance are not uniform for the consultants appointed under the Karnataka Health System Development and Reform Project. Some of the consultants are drawing travel allowances at the rate applicable to that of a group B gazetted officer. The Terms of Reference (ToRs) of the consultants appointed under the Project are not uniform in respect of the Leave/allowance and admissibility of TA/DA. Many ToRs are silent on the admissible/eligibility of the claim. There is no mention of even a single day casual leave for the consultants.

It is intended to make a uniform policy regarding the admissibility of leave/allowances. The Programme Steering Committee has deliberated about this issue in its 26th meeting, and has approved the proposal made by the Project Administrator.

Hence, the following order.

**Government Order No. HFW (PR) 17 WBA 2011, Bangalore, dated 3-1-2012**

Under the circumstences mentioned in the preamble, one Casual Leave for every completed month of service and medical leave as pwr KCSRs has been sanctioned to all the consultants working under the Karnataka Health System Development and Reform Project.

The TA/DA admissible for the consultants are as follows:

| | |
|---|---|
| a) Consultants with consolidated remuneration of Rs. 25,000-00 per month or more | Rates as applicable to that of a Category-I officer of State Government as per KCSR. |
| b) Consultants with consolidated remuneration of less than Rs.25,000-00 per month | Rates as applicable to that of a Category-II officer of State Government as per KCSR. |

This Government Order, being issued under the KHSDRP is valid only during the Project period.

By Order and in the name of the Governor of Karnataka

**K.N. Ramesh**

Deputy Secretary to Govt. (I/c)

KHSDRP

P.R. 307 Health & Famliy Welfare Department

## TRANSPORT SECRETARIAT

**Corrigendum**

No. SAREE 103 SAEPA 2011, Bangalore, Dated : 28-12-2011

In Government order No. Sarie 103 Saepa 2011, dated : 20-12-2011 (Unique No. 118/08) at page 7 in the operative portion of the Government order, in Para (1)(i), the words " for payment of the amount" shall be and shall always be read as " for direct collection by the bidder of the amount".

By Order and in the name of the Governor of Karnataka

**Ramachandra**

Under Secretary to Government,

P.R. 308 Transport Department

## COMMERCE AND INDUSTRIES SECRETARIAT

**CORRIGENDUM**

**No. CI/280/SPI/2011, Bangalore dated 4th January 2012**

**Sub :** Approval to the Project Proposal of M/s. Minera Steel and Power Pvt. Ltd., Bellary for enhancement of power generation capacity from 15 MW to 35 MW at Yerabanahalli Village, Sandur Taluk, Bellary District.

**Read :**
1. Govt. Order No. CI 280 SPI 2011, dated : 28-12-2011.
2. Govt. Order dated : 13-05-2008.
3. Govt. Order dated : 12-09-2011.
4. Proceedings of the 26th State High Level Clearance Committee (SHLCC) Meeting held on 09-11-2011.

With reference to the above subject, on page 2 of the Government Order cited at (1) above, under "Infrastructure Facilities", the words.

**"4. As per applicable Tourism Policy of the State"** shall be read as under:-

**4. " As per applicable Industrial Policy of the State".**

By Order and in the name of the Governor of Karnataka,

**Shivashankar Naik. L**

Desk Officer (Technical Cell) I/c

P.R.310 Commerce & Industries Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ವಿ.ಪಿ. ಇಕ್ಕೇರಿ ಐ.ಎ.ಎಸ್. ರವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 498 ಎಸ್ಎಎಸ್ 2011. ದಿನಾಂಕ: 30–09–2011

**2. ಶ್ರೀ ವಿ.ಪಿ. ಇಕ್ಕೇರಿ, ಐ.ಎ.ಎಸ್. ರವರ ಪತ್ರ ಸಂಖ್ಯೆ: ಕಕೊಅಮ:ಆಡಳಿ:7:2011–12/465 ದಿನಾಂಕ: 17–11–2011.**

**ಪ್ರಸ್ತಾವನೆ :**

ಶ್ರೀ ವಿ.ಪಿ. ಇಕ್ಕೇರಿ, ಐ.ಎ.ಎಸ್. ಇವರಿಗೆ ನಾನ್–ಐಎಎಸ್‌ನಿಂದ ಭಾರತೀಯ ಆಡಳಿತ ಸೇವಾ ವೃಂದಕ್ಕೆ ಬಡ್ತಿ ನೀಡಿದ್ದರ ಮೇರೆಗೆ ಅವರು ಕಾರ್ಯ ನಿರ್ವಹಿಸುತ್ತಿದ್ದ ಜಂಟಿ ಆಯುಕ್ತರು (ಪಶ್ಚಿಮ ವಲಯ) ಬಿಬಿಎಂಪಿ ಹುದ್ದೆಯ ಕಾರ್ಯಭಾರವನ್ನು ದಿನಾಂಕ: 19–09–2011ರಂದು ವಹಿಸಿಕೊಟ್ಟು ದಿನಾಂಕ: 20–09–2011 ರಂದು ಪೂರ್ವಾಹ್ನ ಸಿ.ಆ.ಸು. ಇಲಾಖೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದ ನಂತರ ಅವರನ್ನು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 30–09–2011 ಅಧಿಸೂಚನೆಯಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಹುದ್ದೆಗೆ ನೇಮಿಸಿದ್ದು. ಈ ಆದೇಶದ ಮೇರೆಗೆ ದಿನಾಂಕ: 12–10–2011ರ ವಸತಿ ಇಲಾಖೆಯು ಹೊರಡಿಸಿದ ಮರುನೇಮಕಾತಿ ಆದೇಶದನ್ವಯ ಶ್ರೀ ವಿ.ಪಿ. ಇಕ್ಕೇರಿ, ಐ.ಎ.ಎಸ್., ಇವರು ದಿನಾಂಕ: 13–10–2011ರಂದು (ಪೂರ್ವಾಹ್ನ) ಸದರಿ ಹುದ್ದೆಯ ಕಾರ್ಯಭಾರ ವಹಿಸಿಕೊಂಡಿರುತ್ತಾರೆ. ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 17–11–2011ರ ಪತ್ರದಲ್ಲಿ ಶ್ರೀ ವಿ.ಪಿ. ಇಕ್ಕೇರಿ ಐ.ಎ.ಎಸ್. ರವರು ದಿನಾಂಕ: 20–09–2011 ರಿಂದ 12–10–2011 ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿದ್ದಾರೆ. ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ. ಆದುದರಿಂದ ಈ ಕೆಳಕಂಡ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 199 ಎಸ್ಐಎಸ್ 2011, ಬೆಂಗಳೂರು, ದಿನಾಂಕ : 07-01-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ವಿ.ಪಿ. ಇಕ್ಕೇರಿ ಐ.ಎ.ಎಸ್. ಇವರು ದಿನಾಂಕ: 20–09–2011ರಿಂದ 12–10–2011 ರವರೆಗಿನ ಕಳೆದ ಅವಧಿಯನ್ನು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/1/ಟಿಎಫ್‌ಪಿ/96, ದಿನಾಂಕ: 10–07–1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–1)

ಪಿ.ಆರ್. 312

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ ಆನಾಸ/67 ಡಿಆರ್ಎ 2011 ಬೆಂಗಳೂರು ದಿನಾಂಕ: 29–12–2011**

**ವಿಷಯ :** ರಾಜ್ಯದ ನ್ಯಾಯಬೆಲೆ ಅಂಗಡಿಗಳ ಮೂಲಕ ಪಡಿತರ ವಿತರಿಸುವ ಚಿಲ್ಲರೆ ವರ್ತಕರಿಗೆ ಗೋದಿಯ ಚಿಲ್ಲರೆ ಲಾಭಾಂಶವನ್ನು ಹೆಚ್ಚಿಸುವ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ: ಆನಾಸ 67 ಡಿಆರ್ಎ 2011, ಬೆಂಗಳೂರು, 9ನೇ ಡಿಸೆಂಬರ್ 2011 ರಲ್ಲಿನ ಆದೇಶ ಭಾಗದ ಒಂದನೇ ಕಂಡಿಕೆಯ ಎರಡನೇ ಸಾಲಿನಲ್ಲಿ **"ಪಟ್ಟಣ/ನಗರ/ಅನೌಪಚಾರಿಕ ಪಡಿತರ ಪ್ರದೇಶಗಳಲ್ಲಿ"** ಎಂಬುದರ ಬದಲಾಗಿ **"ರಾಜ್ಯದಲ್ಲಿನ 20459"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಈ ತಿದ್ದುಪಡಿಯನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣೆ ಸಂಖ್ಯೆ: ಆಇ/930/ವೆಚ್ಚ–5/2011, ದಿನಾಂಕ: 16–11–2011 ರಲ್ಲಿನ ಸೂಚನೆಯ ಅನುಸಾರ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ. (ಆಹಾರ–1 ಮತ್ತು 2)

ಪಿ.ಆರ್. 313

## ಶಿಕ್ಷಣ ಸಚಿವಾಲಯ

**ವಿಷಯ :** ಕಾಣೆಯಾಗಿರುವ ಶ್ರೀ ಕೆ. ಶ್ರೀನಿವಾಸ್, ಸಹಾಯಕ ಆಫ್‌ಸೆಟ್ ಮುದ್ರಕರು, ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯ, ಮೈಸೂರು ಇವರ ಕುಟುಂಬಕ್ಕೆ ಪಿಂಚಣಿ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 21-04-2011ರ ಮಾನ್ಯ ಸಿವಿಲ್ ಜಡ್ಜ್, ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು, ಆದೇಶ ಸಂಖ್ಯೆ: ಓ.ಎಸ್.ನಂ. 1635/2010.

2. ದಿನಾಂಕ: 03–09–2011ರ ಸರ್ಕಾರಿ ಮುದ್ರಣಾಲಯ ನಿರ್ದೇಶಕರ ಪತ್ರ ಸಂಖ್ಯೆ: ಡಿಪಿಎಸ್/ಸಿಸಿಎ–06(08)/17322011–12.

3. ದಿನಾಂಕ: 21–03–1988ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆರ್ಥಿಕ (ವಿಶೇಷ) 11 ಕುವಿವೇ/87.

**ಪ್ರಸ್ತಾವನೆ :**

1) ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಕಾಣೆಯಾದ ಶ್ರೀ ಕೆ. ಶ್ರೀನಿವಾಸ್, ಸಹಾಯಕ ಆಫ್‌ಸೆಟ್ ಮುದ್ರಕರು, ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯ, ಮೈಸೂರು. ರವರ ಪತ್ನಿ ಶ್ರೀಮತಿ ಗೀತಾ ದೇವಿ ರವರು ನ್ಯಾಯಾಧೀಶರು 4ನೇ ಅಪರ 1ನೇ ಸಿವಿಲ್ ಜಡ್ಜ್ ಹಾಗೂ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು. ಇಲ್ಲಿ ತಮ್ಮ ಪತಿ ದಿನಾಂಕ: 09–04–2001 ರಂದು ಕಾಣೆಯಾಗಿದ್ದು, ಇವರ ಪತ್ತೆಗಾಗಿ ಮಾಡಿರುವ ಎಲ್ಲಾ ಪ್ರಯತ್ನಗಳು ವಿಫಲವಾಗಿರುವ ಬಗ್ಗೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಕೃಷ್ಣರಾಜ ಪೊಲೀಸ್ ಠಾಣೆ, ಮೈಸೂರು. ಇವರು ವರದಿ ನೀಡಿದ ಹಿನ್ನೆಲೆಯಲ್ಲಿ ಶ್ರೀಮತಿಯವರ ಪತಿ ಕಾಣೆಯಾದ ಬಗ್ಗೆ ನ್ಯಾಯಾಲಯದಲ್ಲಿ ದಾವೆ ದಾಖಲಿಸಿದ್ದು, (ಸಂಖ್ಯೆ: 1635/2010) ಮಾನ್ಯ ನ್ಯಾಯಾಲಯವು ದಿನಾಂಕ: 21–04–2011 ರಲ್ಲಿ ತೀರ್ಪು ನೀಡಿ ಶ್ರೀ ಕೆ. ಶ್ರೀನಿವಾಸ್ ಇವರು ದಿನಾಂಕ: 09–04–2009 ರಿಂದ ಮೃತರಾಗಿರುವುದಾಗಿ ಭಾವಿಸಿರುವುದಾಗಿಯೂ ಹಾಗೂ ಮೃತ ಸರ್ಕಾರಿ ನೌಕರರ ಕುಟುಂಬಕ್ಕೆ ಲಭ್ಯವಾಗುವ ಆರ್ಥಿಕ ಸೌಲಭ್ಯವನ್ನು ಬಿಡುಗಡೆ ಮಾಡಲು ಆದೇಶ ನೀಡಿರುತ್ತಾರೆ.

2) ಮೇಲೆ (2) ರಲ್ಲಿ ಓದಲಾದ ನಿರ್ದೇಶಕರ ಪ್ರಸ್ತಾವನೆಯಲ್ಲಿ ಮೈಸೂರಿನ ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯದಲ್ಲಿ ಸಹಾಯಕ ಆಫ್‌ಸೆಟ್ ಮುದ್ರಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಕೆ. ಶ್ರೀನಿವಾಸ್‌ರವರು ದಿನಾಂಕ : 9–4–2001 ರಿಂದ ಕಾಣೆಯಾಗಿರುತ್ತಾರೆಂದು ಅವರ ಪತ್ನಿ ಶ್ರೀಮತಿ ಗೀತಾ ದೇವಿ ರವರು ಮಾಹಿತಿಯನ್ನು ಸಲ್ಲಿಸಿ ದಿನಾಂಕ : 21–4–2011ರ ನ್ಯಾಯಾಲಯದ ಆದೇಶದಂತೆ ತಮಗೆ ಕುಟುಂಬ ಪಿಂಚಣಿ ಹಾಗೂ ಇತರೆ ಆರ್ಥಿಕ ಸೌಲಭ್ಯವನ್ನು ಬಿಡುಗಡೆ ಮಾಡುವಂತೆ ಕೋರಿ ಮರಣ ಸಮರ್ಥನಾ ಪತ್ರ, ನ್ಯಾಯಾಲಯದ ತೀರ್ಪಿನ ಪ್ರತಿ, ನಷ್ಟಬಂದಿ ಪ್ರಮಾಣ ಪತ್ರ, ವಾರಸುದಾರರ ಪ್ರಮಾಣ ಪತ್ರವನ್ನು ಸಲ್ಲಿಸಿದ್ದು ಶ್ರೀಮತಿ ಗೀತಾ ದೇವಿ ಇವರಿಗೆ ಪಿಂಚಣಿ ಹಾಗೂ ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ ಸರ್ಕಾರದ ಆದೇಶವನ್ನು ನೀಡುವಂತೆ ಮುದ್ರಣ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

3) ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಕಾಣೆಯಾದ ಪೆನ್‌ಷನ್‌ದಾರರ ಕುಟುಂಬಕ್ಕೆ ಪೆನ್‌ಷನ್‌ದಾರರು ಕಣ್ಮರೆಯಾದ ದಿನಾಂಕದಿಂದ ಒಂದು ವರ್ಷದ ಅವಧಿಯು ಕಳೆದ ಬಳಿಕ ಅಂತಹ ನೌಕರರು ಮಾಡಿರುವ ನಾಮ ನಿರ್ದೇಶವನ್ನು ಗಮನದಲ್ಲಿಟ್ಟುಕೊಂಡು ಕುಟುಂಬ ವಿಶ್ರಾಂತಿ ವೇತನವನ್ನು ಮಂಜೂರು ಮಾಡಲು ಅವಕಾಶವನ್ನು ಕಲ್ಪಿಸಿದೆ.

4) ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆ ಇಲಾಖೆಯ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 174 ಇಎಸ್‌ಡಬ್ಲ್ಯೂ 2011, ಬೆಂಗಳೂರು, ದಿನಾಂಕ : 07–01–2012.**

5) ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯ, ಮೈಸೂರು, ಇಲ್ಲಿ ಸಹಾಯಕ ಆಫ್‌ಸೆಟ್ ಮುದ್ರಕರಾಗಿ ಕಾರ್ಯನಿರ್ವಹಿಸುತ್ತಿದ್ದು ದಿನಾಂಕ: 09–04–2001 ರಿಂದ ಕಾಣೆಯಾಗಿರುವ ಶ್ರೀ ಕೆ.ಶ್ರೀನಿವಾಸ್ ಇವರಿಗೆ ಧೀರ್ಘ ಕಾಲದ ಅನಧಿಕೃತ ಗೈರು ಹಾಜರಾತಿಗೆ ಶಿಸ್ತು ಕ್ರಮ ಪ್ರಾರಂಭಿಸಿಲ್ಲವಾದಲ್ಲಿ ದಿನಾಂಕ: 21–03–1988ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆರ್ಥಿಕ (ವಿಶೇಷ) 11 ಕುವಿವೇ 87, ರನ್ವಯ ಎಲ್ಲಾ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೊಳಪಟ್ಟು ಇವರ ಕುಟುಂಬ ವಾರಸುದಾರರಿಗೆ ನಿಯಮಾನುಸಾರ ಪಿಂಚಣಿ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಆದೇಶಿಸಿದೆ.

6) ಈ ಆದೇಶವನ್ನು ಅ.ಟಿ. ಸಂಖ್ಯೆ: ಆಇ(ವಿ) 201 ಪಿಇಎಸ್–1/2011 ದಿನಾಂಕ: 22–09–2011 ರಲ್ಲಿ ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ)ಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಪಟಗಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, (ಸಾಮಾನ್ಯ)

ಶಿಕ್ಷಣ ಇಲಾಖೆ.

ಪಿ.ಆರ್. 311

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ನಂದಿನಿ ಹಾಲಿನ ಮಾರಾಟ ದರ ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಾಲು ಮಹಾ ಮಂಡಳಿ ಬೆಂಗಳೂರು ಇವರ ಪತ್ರ ಸಂಖ್ಯೆ: ಕಹಾಮ/ಮಾರುಕಟ್ಟೆ/263/2011–12, ದಿನಾಂಕ: 15–12–2011.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 15–12–2011ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಾಲು ಮಹಾ ಮಂಡಳಿ, ಬೆಂಗಳೂರು ರವರು ರಾಜ್ಯದ ಹಾಲು ಉತ್ಪಾದಕರ ಹಿತದೃಷ್ಟಿಯಿಂದ ಹಾಲು ಉತ್ಪಾದಕರಿಗೆ ಉತ್ತೇಜಕವಾಗುವಂತಹ ಖರೀದಿ ದರಗಳನ್ನು ನೀಡಲು ಅನುವಾಗುವಂತೆ ನಂದಿನಿ ಹಾಲಿನ ಎಲ್ಲಾ ವಿಧಗಳ ಗರಿಷ್ಠ ಮಾರಾಟ ದರಗಳನ್ನು ಪ್ರತಿ ಲೀಟರಿಗೆ ರೂ. 4.00 ರಂತೆ ಹೆಚ್ಚಿಸಿ ಪರಿಷ್ಕರಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಈ ಸಂಬಂಧ ದಿನಾಂಕ: 31–12–2011 ರಂದು ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾ ಮಂಡಳಿಯ ಅಧ್ಯಕ್ಷರು ಹಾಗೂ ಇತರೆ ಇಲಾಖಾ ಮತ್ತು ಕರ್ನಾಟಕ ಹಾಲು ಮಹಾ ಮಂಡಳಿಯ ಅಧಿಕಾರಿಗಳೊಂದಿಗೆ

ಚರ್ಚಿಸಿ, ಎಲ್ಲಾ ಹಾಲು ಉತ್ಪಾದಕರ ಒಕ್ಕೂಟಗಳು ಪ್ರಸ್ತುತ ಹಾಲಿನ ಉತ್ಪಾದನೆಯ ವೆಚ್ಚದ ಜೊತೆಗೆ ಮೇವು, ಪಶು ಆಹಾರ, ಸಂಸ್ಕರಣೆ ಮತ್ತು ಸಾಗಾಣಿಕೆ ವೆಚ್ಚಗಳು ಹೆಚ್ಚಾಗಿರುವುದರಿಂದ ಪ್ರತಿ ಲೀಟರ್ ಹಾಲಿಗೆ ರೂ. 4.00 ಅಥವಾ ರೂ. 3.00ರಂತೆ ಹೆಚ್ಚಿಸುವ ಬಗ್ಗೆ ತೀರ್ಮಾನ ಕೈಗೊಳ್ಳಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 121 ಕಹಾಮ 2011, ಬೆಂಗಳೂರು, ದಿನಾಂಕ : 06–01–2012.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ರಾಜ್ಯವು ಬರಗಾಲವನ್ನು ಎದುರಿಸುತ್ತಿರುವ ಹಿನ್ನೆಲೆಯಲ್ಲಿ ಹಾಲು ಉತ್ಪಾದಕರ ರೈತರಿಗೆ ಹೈನುಗಾರಿಕೆಯನ್ನು ಪ್ರೋತ್ಸಾಹಿಸಲು ಹಾಗೂ ಒಕ್ಕೂಟಗಳನ್ನು ಸಧೃಡಗೊಳಿಸಲು ಮತ್ತು ಹಾಲು ಉತ್ಪಾದಕರ ಹಿತದೃಷ್ಟಿಯಿಂದ ಎಲ್ಲಾ ವಿಧಗಳ ನಂದಿನಿ ಹಾಲಿನ ಗರಿಷ್ಠ ಮಾರಾಟ ದರಗಳನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಪ್ರತಿ ಲೀಟರಿಗೆ ರೂ. 3.00ರಂತೆ (ಮೂರು ರೂಪಾಯಿಗಳು ಮಾತ್ರ) ಹೆಚ್ಚಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಗೆ ಇಲಾಖೆ.

(ಪಶುಸಂಗೋಪನೆ)

ಪಿ.ಆರ್. 314

## INFRASTRUCTURE DEVELOPMENT SECRETARIAT

**Sub :** Review of Documents for Development of Greenfield Airport at Hassan – payment of fees to iDeck for services.

**Read :**
1. G.O. No. IDD 24 DIA 2010 dated: 21-04-2010.
2. Letter No. iDeck/2010-12/1122 dated: 15-11-2011.

**Preamble :**

In the Government Order read at (1) iDeck has been appointed as Nodal Agency for the development of the Greenfield Airports at Bellary and Hassan along with the construction of airstrips at chitradurga, Karwar, Haveri, Kollegal, Yadgir and Koppal. iDeCK will also continue to be the Nodal Agency for the development of Gulbarga, Shimoga and Bijapur Airports.

2. In the letter read at (2) above, iDeck has sent the advisory assistance proposal for the project monitoring of Minor Airport at Hassan and requested to release a fee of Rs. 4,96,000 towards the services rendered by them for review of DPR and analysis of the Hassan Airport.

3. Proposal has been examined in detail and hence this order.

**GOVERNMENT ORDER NO. IDD 94 DIA 2008, BANGALORE, DATED 03-01-2012.**

Under the Circumstances explained in the preamble, Sanction is accorded for release of Rs.4,96,000/- (Rupees four lakhs ninety-six thousand only) towards fees to iDeck for the servies rendered by iDeck for review of D.P.R. and analysis of the Hassan Airport Project.

2. This amount shall be met under the Head of Account 3451-00-090-1-06-059 – Infrastructure Preliminary Studies. Other Expenditure – out of the provision of Rs. 300.00 lakhs.

3. The Chief Financial Officer, and Company Secretary, iDeCK, Bangalore is authroised to draw the above amount on a payees receipt duly countersigned by the Under Secretary to Government, Infrastructure Development Department, Bangalore.

4 This order issues in accordance with the financial powers delegated to the Principal Secretaries/Secretaries to Government vide G.O. No. FD 1 TFP 2008, dated: 16-05-2008.

By Order and in the name of the Governor of Karnataka,

**S.J. SAMPATH KUMAR**

Under Secretary to Government,

Infrastructure Development Department.

P.R.315

## ಇಂಧನ ಸಚಿವಾಲಯ

**ವಿಷಯ :** ಮೆ: RVS Associates ರವರಿಗೆ 0.25 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರಿಂದ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 26 ಎನ್‌ಸಿಇ 1999 ದಿನಾಂಕ: 13–05–1999,
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 259 ಎನ್‌ಸಿಇ 2004 ದಿನಾಂಕ: 18–03–2005.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 20–06–2009.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 04–03–2011.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 02–08–2011.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/RVSA-0-25(AMTL-17.25MW)/2011/4108 ದಿನಾಂಕ: 17/19–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಅರಸಿನಗುಂಡಿ ಗಾಳಿವಲಯ ಪ್ರದೇಶದ ತುರುವನೂರು (4 ಮೆ.ವ್ಯಾ.) ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಒಟ್ಟು 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ಗಾಳಿ ವಲಯ ಪ್ರದೇಶಗಳಲ್ಲಿ ಹಂಚಿಕೆಮಾಡಲಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 17.25 ಮೆ.ವ್ಯಾ.ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆಮಾಡಲಾಗಿದ್ದ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಆದೇಶದಲ್ಲಿ ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆಮಾಡಲಾಗಿದ್ದ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು ಯೋಜನೆಯ ಅನುಷ್ಠಾನಕ್ಕಾಗಿ ಕೊನೆಯ ಅವಕಾಶವಾಗಿ ಕಾಲಾವಕಾಶವನ್ನು ದಿನಾಂಕ: 31–12–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಆದೇಶದಲ್ಲಿ ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ವಲಯ ಪ್ರದೇಶಗಳಲ್ಲಿ ಹಂಚಿಕೆಯಾಗಿರುವ 6.05 ಮೆ.ವ್ಯಾ. ಹೆಚ್ಚುವರಿ ಸಾಮರ್ಥ್ಯದ (17.25 – 11.2 = 6.05 ಮೆ.ವ್ಯಾ.) ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 31–12–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಲು ಅನುಮತಿಸಲಾದ 17.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.25 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: RVS Associates ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಕಂದಾಯ ಜಮೀನಾಗಿದ್ದು, ಈ ಯೋಜನೆಯನ್ನು 31–12–2011ರೊಳಗೆ ಪೂರ್ಣಗೊಳಿಸಲಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ಪಿಪಿಎ ಮೂಲಕ ಎಸ್ಕಾಂಗೆ ಮಾರಾಟಮಾಡುವುದಾಗಿಯೂ ಸಹ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 416 ಎನ್‌ಸಿಇ 2011, ಬೆಂಗಳೂರು, ದಿನಾಂಕ : 16–11–2011.**

ಮೆ: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯವರಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ಗಾಳಿ ವಲಯ ಪ್ರದೇಶಗಳಲ್ಲಿ ಅನುಮತಿಸಲಾದ 17.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: RVS Associates ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ:–

| Village | Taluk | District | MW | Type of land | Land Survry Number | No. of WTGs | Extent in Land (Acres) |
|---|---|---|---|---|---|---|---|
| Turuvanur | Chitradurga | Chitradurga | 0.25 | Revenue | 339 | AMNTL-5 | 0.56 |

1. ಮೆ: RVS Associates ರವರು 45 ದಿನಗಳ ಒಳಗೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. PPA is assined to BESCOM, BESCOM shall execute the PPA with M/s. RVS Associates within the period of one month.
3. ಸದರಿ ಕಂಪನಿಯು ಯೋಜನೆಯನ್ನು ದಿನಾಂಕ 31–12–2011 ರೊಳಗಾಗಿ ಅನುಷ್ಠಾನಗೊಳಿಸುವುದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 316 ಇಂಧನ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಹಂಪಾಪುರ ಗ್ರಾಮದ ಸ.ನಂ. 1/1 ಮತ್ತು ಸ.ನಂ. 18/1ರ ಒಟ್ಟು ವಿಸ್ತೀರ್ಣ 15.19 ಎಕರೆ ಎ ಮತ್ತು ಬಿ ಸರ್ಕಾರಿ ಖರಾಬು ಜಮೀನನ್ನು ಖಾಸಗಿ ವಸತಿ ಉದ್ದೇಶಕ್ಕಾಗಿ ಕರ್ನಾಟಕ ಗೃಹ ಮಂಡಳಿಗೆ ಮಂಜೂರು ಮಾಡುವ ಬಗ್ಗೆ:–

**ಓದಲಾಗಿದೆ :** ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಎಸ್) ಸಿಆರ್/120/09–10, ದಿನಾಂಕ 23–08–2010, 06–09–2010 ಮತ್ತು 18–10–2010.

**ಪ್ರಸ್ತಾವನೆ :**

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ದಿನಾಂಕ 23–08–2010, ದಿನಾಂಕ 06–09–2010 ಮತ್ತು ದಿನಾಂಕ 18–10–2010ರ ಪತ್ರಗಳಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ಹಂಪಾಪುರ ಗ್ರಾಮದಲ್ಲಿನ ಸ.ನಂ. 1/1 ಮತ್ತು ಇತರೆ ಸರ್ವೆ ನಂಬರುಗಳಲ್ಲಿನ

ಸುಮಾರು 104 ಎಕರೆ 34¾ ಗುಂಟೆ ಜಮೀನಿನಲ್ಲಿ ಹಮ್ಮಿಕೊಂಡಿರುವ ವಸತಿ ಯೋಜನೆಗೆ ಸಂಬಂಧಿಸಿದಂತೆ ವಸತಿ ಇಲಾಖೆಯು ಮೆಮೊರಾಂಡಂ ಆಫ್ ಜಾಯಿಂಟ್ ವೆಂಚರ್ ಅಗ್ರಿಮೆಂಟ್‌ಗೆ ಅನುಮೋದನೆ ನೀಡಿದ್ದು, ಈ ಸಂಬಂಧ ಸದರಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳಲು ಈಗಾಗಲೇ ಕರ್ನಾಟಕ ಗೃಹ ಮಂಡಳಿಯ ಹೆಸರಿಗೆ ಪಿಪಿಪಿ ಸಹಭಾಗಿತ್ವದ ಪಾಲುದಾರರು 104 ಎಕರೆ 34¾ ಗುಂಟೆ ಜಮೀನನ್ನು ಕರ್ನಾಟಕ ಗೃಹ ಮಂಡಳಿಗೆ ವರ್ಗಾಯಿಸಿರುತ್ತಾರೆ ಎಂದು ತಿಳಿಸುತ್ತಾ. ಇದರಲ್ಲಿ ವಿವಿಧ ಸರ್ವೆ ನಂಬುರಗಳ ಜಮೀನುಗಳಲ್ಲಿ ಒಟ್ಟು 15 ಎಕರೆ 19 3/4 ಗುಂಟೆ ಅ ಮತ್ತು ಬಿ ಸರ್ಕಾರಿ ಖರಾಬುಗಳಿದ್ದು. ಈ ಖರಾಬು ಜಮೀನುಗಳು ಕರ್ನಾಟಕ ಗೃಹ ಮಂಡಳಿಗೆ ಈಗಾಗಲೇ ವರ್ಗಾಯಿಸಲಾಗಿರುವ ಜಮೀನುಗಳ ಮಧ್ಯ ಭಾಗದಲ್ಲಿ ಬರುತ್ತದೆ ಎಂದು ತಿಳಿಸಿರುತ್ತಾರೆ.

ಈ ಸರ್ಕಾರಿ ಖರಾಬು ಜಮೀನುಗಳು ಮೂಲ ಕೃಷಿ ಸ್ವರೂಪವನ್ನು ಕಳೆದುಕೊಂಡು ಕಲ್ಲುಮರಟೆ ಗುಡ್ಡ ಎಂಬುದು ಖಚಿತವಾಗಿದೆ ಮತ್ತು ಸದರಿ ಸರ್ವೆ ನಂಬರುಗಳಲ್ಲಿ ಖರಾಬು ಕಂಡುಬರುವುದಿಲ್ಲ, ರೀ ಸರ್ವೆ ಕಾಲದಲ್ಲಿಯೂ ಸಹ ಈ ಜಮೀನುಗಳು ಹಿಡುವಳಿ ಭೂಮಿಯಿಂದ ಪರಿವರ್ತನೆಯಾಗಿರುವುದು ಸ್ಥಳ ತನಿಖೆಯಿಂದ ಕಂಡುಬರುವುದಲ್ಲದೇ ಸದರಿ ಸರ್ವೆ ನಂಬರುಗಳಲ್ಲಿನ ಕಲ್ಲುಮರಟೆ ಸ್ವರೂಪದ ಖರಾಬು ಉಪಯೋಗಿಸದೇ ಇದ್ದು, ಇಂತಹ ಜಮೀನುಗಳನ್ನು ಭೂ ಕಂದಾಯ ಕಾಯ್ದೆ ಕಲಂ 69, 91 ಮತ್ತು ಭೂ ಮಂಜೂರಾತಿ ನಿಯಮ 20(1)(ಸಿ)ರನ್ವಯ ಪ್ರತಿ ಎಕರೆಗೆ ಮಾರ್ಗಸೂಚಿ ಬೆಲೆಯ ಶೇ 50 ರಂತೆ ಎಕರೆಯೊಂದಕ್ಕೆ ರೂ. 17,50,000/–ಗಳನ್ನು ವಿಧಿಸಿ ಕರ್ನಾಟಕ ಗೃಹ ಮಂಡಳಿಗೆ ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಕೆಳಕಂಡ ಅಂಶಗಳನ್ನು ಗಮನಿಸಲಾಗಿದೆ:–

i) ಇದು ವಸತಿ ಇಲಾಖೆಯಿಂದ ಅನುಮೋದಿಸಲ್ಪಟ್ಟ ಮತ್ತು ಸರ್ಕಾರಿ ಸ್ವಾಮ್ಯದ ಸಂಸ್ಥೆಯಾದ ಕರ್ನಾಟಕ ಗೃಹ ಮಂಡಳಿಯು ಖಾಸಗಿ ಸಹಭಾಗಿತ್ವದಲ್ಲಿ ಕೈಗೊಂಡಿರುವ ಸಾರ್ವಜನಿಕ ವಸತಿ ಯೋಜನೆಯಾಗಿದ್ದು, ಸದರಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳಲು ಈಗಾಗಲೇ ಕರ್ನಾಟಕ ಗೃಹ ಮಂಡಳಿಯ ಹೆಸರಿಗೆ ಪಿಪಿಪಿ ಸಹಭಾಗಿತ್ವದ ಪಾಲುದಾರರು 104 ಎಕರೆ 34 3/4 ಗುಂಟೆ ಜಮೀನು ವರ್ಗಾಯಿಸಿದ್ದು, ಈ ಜಮೀನುಗಳ ಮದ್ಯೆ ಸರ್ಕಾರಿ ಖರಾಬು ಒಟ್ಟು 15 ಎಕರೆ 19 3/4 ಗುಂಟೆ ಜಮೀನು ಇದ್ದು, ಸದರಿ ಎಲ್ಲಾ ಸರ್ವೆ ನಂಬರುಗಳಲ್ಲಿನ ಜಮೀನು ಆರ್.ಟಿ.ಸಿ. ಯಂತೆ ಈ ಖರಾಬಿನೊಂದಿಗೆ ಕರ್ನಾಟಕ ಗೃಹ ಮಂಡಲಿಯ ಮಾಲೀಕತ್ವದಲ್ಲಿರುತ್ತದೆ ಮತ್ತು ಬಡಾವಣೆ ಅಭಿವೃದ್ಧಿ ನಕ್ಷೆ ಕರ್ನಾಟಕ ಗೃಹ ಮಂಡಳಿಯಿಂದ ಅನುಮೋದನೆಯಾಗಿದೆ.

ii) ಇದರಲ್ಲಿ ಶೇ. 25ರಷ್ಟು ಬಡಾವಣೆಯನ್ನು ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ಲಾಭವಿಲ್ಲದೇ ಮೀಸಲಾಗಿರಿಸಲು ಉದ್ದೇಶಿಸಲಾಗಿದೆ.

iii) ಸರ್ವೆ ಇಲಾಖೆ ಇವರ ಅಭಿಪ್ರಾಯದಂತೆ ಸದರಿ ಖರಾಬು ಜಮೀನುಗಳು ಮೂಲ ಮತ್ತು 2ನೇ ಕ್ಲಾಸಿಫಿಕೇಷನ್ ಕಾಲದಲ್ಲಿ ಹಿಡುವಳಿ ಖರಾಬು ನಂಬರುಗಳಾಗಿ ಮುಂದುವರೆದಿದ್ದು, ಖರಾಬು ಅಸ್ತಿತ್ವಗಳನ್ನು ಕಳೆದುಕೊಂಡಿರುತ್ತವೆ.

iv) ಸದರಿ ಜಮೀನು ಕಲ್ಲುಮರಟಿ ಸ್ವರೂಪವಾಗಿದ್ದು, ಕೃಷಿ ಸ್ವರೂಪವನ್ನು ಕಳೆದುಕೊಂಡಿರುತ್ತದೆ

v) ಸದರಿ ಸರ್ಕಾರಿ ಖರಾಬುಗಳ ಬಹುತೇಕ ಭಾಗವನ್ನು ನಾಗರಿಕ ಸೌಲಭ್ಯಕ್ಕಾಗಿ ಮೀಸಲಿಡಲಾಗುವುದು

ಸರ್ಕಾರವು ವಿಶೇಷ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: 701 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ 09–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಶಿಫಾರಸ್ಸಿನಂತೆ ಮತ್ತು ಭೂಮಾಪನ ಇಲಾಖೆಯ ಅಭಿಪ್ರಾಯದಂತೆ, ಪಿಪಿಪಿ ಯೋಜನೆ ಅಡಿ ಈಗಾಗಲೇ ಪಾಲುದಾರರಿಂದ ಕರ್ನಾಟಕ ಗೃಹ ಮಂಡಳಿಗೆ ಹಸ್ತಾಂತರಿಸಲ್ಪಟ್ಟಿರುವ 104 ಎಕರೆ 34¾ ಗುಂಟೆ ಜಮೀನಿನ ಮಧ್ಯೆ ಬರುವ ಹಂಪಾಪುರ ಗ್ರಾಮದ ಸ.ನಂ. 1/1 ಮತ್ತು ಇತರೆ ಸ.ನಂ. ಗಳಲ್ಲಿರುವ 15 ಎಕರೆ 19 3/4 ಗುಂಟೆ ಎ ಮತ್ತು ಬಿ ಖರಾಬು ಜಮೀನುಗಳನ್ನು ಕರ್ನಾಟಕ ಗೃಹ ಮಂಡಳಿರವರಿಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 69, 91 ಮತ್ತು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇ. 50 ರಷ್ಟು ದರ ವಿಧಿಸುವ ಬದಲು, ಸದರಿ ಜಮೀನಿನ ಪ್ರಚಲಿತ ಪೂರ್ಣ ಮಾರುಕಟ್ಟೆ ದರ ವಿಧಿಸಿ ಮತ್ತು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮಂಜೂರು ಮಾಡಿ ಆದೇಶಿಸಿದೆ.

1. ಕರ್ನಾಟಕ ಗೃಹ ಮಂಡಳಿಯ ಸಾರ್ವಜನಿಕ ಪಿ.ಪಿ.ಪಿ. ವಸತಿ ಯೋಜನೆಯಡಿ Joint Venture Agreement ನಂತೆ ಶೇ. 25 ರಷ್ಟು ಬಡಾವಣೆಯನ್ನು ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ಕಡ್ಡಾಯವಾಗಿ ಮೀಸಲಿಡತಕ್ಕದ್ದು.
2. ಸದರಿ ಸಾರ್ವಜನಿಕ ವಸತಿ ಯೋಜನೆಗೆ ಅವಶ್ಯವಾಗಿರುವ "ಎ" ಮತ್ತು "ಬಿ" ಖರಾಬುಗಳಲ್ಲಿ ಬರುವ ಬಂಡಿದಾರಿ, ಕಾಲುದಾರಿ ಪ್ರದೇಶಗಳನ್ನು ಕರ್ನಾಟಕ ಗೃಹ ಮಂಡಳಿಯಿಂದ ಅನುಮೋದಿತವಾಗಿರುವ ಸಾರ್ವಜನಿಕ ವಸತಿ ಯೋಜನೆ ನಕ್ಷೆಯಂತೆ ನಾಗರೀಕ ಸೌಲಭ್ಯ ಆಸ್ತಿಗಳನ್ನಾಗಿಯೇ ಮುಂದುವರೆಸಿಕೊಂಡು ಹೋಗತಕ್ಕದ್ದು.
3. ಸದರಿ ಸರ್ಕಾರಿ ಜಮೀನುಗಳನ್ನು ಯಾವುದೇ ಕಾರಣಕ್ಕೂ ಬೇರೆ ಉದ್ದೇಶಕ್ಕೆ ಉಪಯೋಗಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕೆ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 507 ಕಂದಾಯ ಇಲಾಖೆ (ಭೂ.ಮಂ.)

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಂಗೂರ, ಹಾವೇರಿ ಜಿಲ್ಲೆ, ಇದರ 2006–07 ರಿಂದ 2010–11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ 31–03–2012ರೊಳಗೆ ನಡೆಸಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ :** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರ ಪತ್ರ ಸಂಖ್ಯೆ: DSK-ESTS-55-2011-12, ದಿನಾಂಕ 17–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರು ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಂಗೂರು ತಾಲ್ಲೂಕು, ಹಾವೇರಿ ಇದನ್ನು ಸಕಾರದ ಆದೇಶ ಸಂಖ್ಯೆ: ಸಿಡಿ–63–ಸಸಕಾ–2007(ಪಿ), ದಿನಾಂಕ 10–01–2008 ರನ್ವಯ ದಿನಾಂಕ 18–2–2008 ರಿಂದ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲಾಗಿದೆ. ಕಾರ್ಖಾನೆಯ 2006–07 ರಿಂದ 2010–11ನೇ ಸಾಲಿನವರೆಗೆ ವಾರ್ಷಿಕ ಮಹಾ ಸಭೆಗಳನ್ನು ನಡೆಸಬೇಕಾಗಿದ್ದು, ಅದರಂತೆ ಸದರಿ ಸಭೆಗಳನ್ನು ನಡೆಸಲು ಹಣಕಾಸಿನ ಲಭ್ಯತೆ ಇಲ್ಲದಿರುವುದರಿಂದ ಕಾರ್ಖಾನೆಯು ರೂ. 63 ಕೋಟಿಗಳಿಗೂ ಮಿಕ್ಕಿ ಹಾನಿಯನ್ನು ಹೊಂದಿದ್ದು ತೀರಿಸಬೇಕಾದ ಹೊಣೆಗಾರಿಕೆಗಳು ರೂ. 54 ಕೋಟಿಗೂ ಮಿಕ್ಕಿ ಇರುತ್ತದೆ. ಗುತ್ತಿಗೆ ಒಪ್ಪಂದದಂತೆ 2011–12ನೇ ಸಾಲಿನ ಗುತ್ತಿಗೆ ಹಣ ದಿನಾಂಕ 30–09–2011 ರೊಳಗೆ ಕಾರ್ಖಾನೆಗೆ ಪಾವತಿಸಬೇಕಾಗಿದ್ದು, ಅದರಿಂದ ಲಭ್ಯವಾಗುವ ಹಣವನ್ನು ಯಾವ–ಯಾವ ರೀತಿ ಯಾವ–ಯಾವ ಬಾಬ್ತುಗಳಿಗೆ ವೆಚ್ಚಮಾಡಬೇಕೆನ್ನುವ ಬಗ್ಗೆ ದಿನಾಂಕ 23–07–2011 ರಂದು ಕಾರ್ಖಾನೆಗೆ ಸಂಬಂಧಿಸಿದಂತಹ ರಾಜ್ಯ ಮಟ್ಟದ ಸಲಹಾ ಸಮಿತಿ ಸಭೆಯಲ್ಲಿ ನಿರ್ಣಯಿಸಿದ್ದು, ಅದರಂತೆ ಕಾರ್ಖಾನೆಯ 2006–07 ರಿಂದ 2010–11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ 31–03–2012ರ ಒಳಗೆ ನಡೆಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಅದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಸಇ 17 ಸಸಕಾ 2011, ಬೆಂಗಳೂರು, ದಿನಾಂಕ 23–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘ ಅಧಿನಿಯಮ 1959ರ ಪ್ರಕರಣದ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 27(1)ನ್ನು ಸಡಿಲಿಸಿ ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಂಗೂರ ಹಾವೇರಿ ಜಿಲ್ಲೆ ಇದರ 2006–07ರಿಂದ 2010–11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ 31–03–2012ರೊಳಗೆ ನಡೆಸಲು ಅನುಮತಿ ನೀಡಿದೆ.

**ಸೂಚನೆ:**

ಕರ್ನಾಟಕ ಸಹಕಾರ ಸಂಘ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31–03–2012ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಅದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 317

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಕುಲಾಲಗುಂಡ ಬ್ರಹ್ಮಾರ್ಯ ಕುಂಬಾರರ ಸಂಘ, (ರಿ) ಮೈಸೂರು ಇದರ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 08–08–2011ರ ಪತ್ರದಲ್ಲಿ ಶ್ರೀ ಕುಲಾಲಗುಂಡ ಬ್ರಹ್ಮಾರ್ಯ ಕುಂಬಾರರ ಸಂಘ, ಮೈಸೂರು, ಈ ಸಂಘದ ಬಗ್ಗೆ ಸಹಕಾರ ಸಂಘಗಳ ಉಪ ನಿಬಂಧಕರು ಮೈಸೂರು ಇವರು ಸಂಘದಲ್ಲಿನ ಕೆಲವೊಂದು ಆರೋಪಗಳ ಕುರಿತಂತೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರಡಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮೈಸೂರು ಉಪವಿಭಾಗ ಮೈಸೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದ್ದು ಅದರಂತೆ, ವಿಚಾರಣಾಧಿಕಾರಿಗಳು, ಈ ಕೆಳಂಡಂತೆ ವರದಿ ಮಾಡುತ್ತಾ ಸಂಘದಲ್ಲಿ ಲೆಕ್ಕಪತ್ರಗಳನ್ನು 2005–06 ರಿಂದ 2008–09ನೇ ಸಾಲುಗಳಲ್ಲಿ ಶ್ರೀ ಕೆ. ಟಿ. ಲಕ್ಷ್ಮಣ್ ಶೆಟ್ಟಿ ಇವರು ಅಧ್ಯಕ್ಷರೆಂದು ಹಾಗೂ ಸದರಿ ಅವಧಿಯಲ್ಲಿ ಶ್ರೀ ಕೆ. ಆರ್. ಸೋಮಶೇಖರ್ ಇವರು ಕಾರ್ಯದರ್ಶಿ ಎಂದು ಲೆಕ್ಕಪತ್ರಗಳನ್ನು ಮೈಸೂರು ಉಪನಿಬಂಧಕರ ಕಛೇರಿಗೆ ಸಲ್ಲಿಸಿದ್ದು, ಅದೇ ಅವಧಿಯಲ್ಲಿ ಶ್ರೀ ಚೆನ್ನಕೇಶವ ಇವರು ಅಧ್ಯಕ್ಷರೆಂದು ಹೇಳಿ ಸ್ವೀಕೃತಿಗಾಗಿ ಮೈಸೂರು ಉಪನಿಬಂಧಕರ ಕಛೇರಿಗೆ ಲೆಕ್ಕಪತ್ರಗಳನ್ನು ಸಲ್ಲಿಸಿರುತ್ತಾರೆ.

ಸಂಘದ ಲೆಕ್ಕಪತ್ರಗಳನ್ನು 2 ಗುಂಪುಗಳು ತಮ್ಮದೇ ನಿಜವಾದ ಆಡಳಿತ ಮಂಡಳಿಯೆಂದು ಪರಿಗಣಿಸಲು ಉಪನಿಬಂಧಕರು ಮೈಸೂರು ರವರನ್ನು ಕೋರಿರುತ್ತಾರೆ. ಈ ರೀತಿ 2 ಗುಂಪುನವರು ಲೆಕ್ಕಪತ್ರಗಳನ್ನು ಸಲ್ಲಿಸಿ ಸ್ವೀಕೃತಿ ಕೋರಿದ್ದ ಬಗ್ಗೆ ನೈಜ ಆಡಳಿತ ಮಂಡಳಿಯನ್ನು ಗುರುತಿಸಲು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರಡಿ ವಿಚಾರಣೆ ಜರುಗಿಸಲಾಗಿದೆ. ವಿಚಾರಣಾ ವೇಳೆಯಲ್ಲಿ 2 ಗುಂಪಿನವರು ಕಾನೂನು ಅಥವಾ ಬೈಲಾ ಮಹಾಸಭೆ ಹಾಗೂ ಚುನಾವಣೆ ನಡೆಸಿರುವ ಕ್ರಮವು ಕಾನೂನುಬಾಹಿರವಾಗಿದ್ದು, ಆಯ್ಕೆ ಮಾಡಲಾಗಿರುವ ಬಗ್ಗೆ ದಾಖಲಾತಿಗಳನ್ನು ಒದಗಿಸಲು ವಿಫಲರಾಗಿರುತ್ತಾರೆ ಹಾಗೂ ವಿಚಾರಣಾಧಿಕಾರಿಗಳು ಸಂಘದ ಬೈಲಾ ರೀತ್ಯಾ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ಹಾಗೂ ವಾರ್ಷಿಕ ಮಹಾಸಭೆಯನ್ನು 2 ಗುಂಪಿನವರು ನಡೆಸಲು ವಿಫಲರಾಗಿರುತ್ತಾರೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಈಗಾಗಲೇ ಆಡಳಿತ ಮಂಡಳಿ ಸದಸ್ಯರ ಅವಧಿಯು ಮುಗಿದಿರುವುದರಿಂದ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಆಡಳಿತಾಧಿಕಾರಿಯನ್ನು ನೇಮಿಸಿರುವುದು ಸೂಕ್ತವೆಂದು ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳೂ ಮೈಸೂರು ಜಿಲ್ಲೆ ಹಾಗೂ ಉಪನಿಬಂಧಕರು ಮೈಸೂರು ಇವರು

ಅಭಿಪ್ರಾಯಪಟ್ಟಿರುತ್ತಾರೆ. ಆದ್ದರಿಂದ ಉಪನಿಬಂಧಕರು ಮೈಸೂರು ಹಾಗೂ ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳು ಮೈಸೂರು ಜಿಲ್ಲೆ, ಮೈಸೂರು ರವರ ಅಭಿಪ್ರಾಯದಂತೆ ಮೇಲ್ಕಂಡ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ರನ್ವಯ ಪ್ರಸ್ತಾವನೆಯನ್ನು ಪರಿಗಣಿಸಲು ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 161 ಸಸಂನೋ 2011, ಬೆಂಗಳೂರು, ದಿನಾಂಕ 07-01-2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕುಲಾಲಗುಂಡ ಬ್ರಹ್ಮಾರ್ಯ ಕುಂಬಾರರ ಸಂಘ (ರಿ) ಬನುಮಯ್ಯ ರಸ್ತೆ, ಮೈಸೂರು. ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಉಪ ನಿಬಂಧಕರು ಹಾಗೂ ಸಂಘ ಸಂಸ್ಥೆಗಳ ಜಿಲ್ಲಾ ನೋಂದಣಾಧಿಕಾರಿಗಳು ಮೈಸೂರು ಜಿಲ್ಲೆ, ಮೈಸೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಅರು (06) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತರಾದ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಿ ಸರ್ಕಾರಕ್ಕೆ ವರದಿಯನ್ನು ನೀಡಬೇಕೆಂದು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ. ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 318

**ಸಹಕಾರ ಸಚಿವಾಲಯ**

**ವಿಷಯ :** ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಬಾಗ, ಬೆಳಗಾವಿ ಜಿಲ್ಲೆ ಇದರ 2000-01 ರಿಂದ 2010-11ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ಜರುಗಿಸಲು ಕಾಲಾವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ :** 1) ವಿಶೇಷಾಧಿಕಾರಿಗಳು, ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಬಾಗ ಇವರ ಪತ್ರ ಸಂಖ್ಯೆ: ರಾಸಸಕಾ/ವಾರ್ಷಿಕ ಮಹಾಸಭೆ/2011-12, ದಿನಾಂಕ 11-11-2011.

**2)** ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿಎಸ್/54/2011-12, ದಿನಾಂಕ 25-11-2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ವಿಶೇಷಾಧಿಕಾರಿಗಳು, ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಬಾಗ, ಬೆಳಗಾವಿ ಜಿಲ್ಲೆ ಇವರು 2000-01 ರಿಂದ 2010-11ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ದಿನಾಂಕ 30-09-2012ರಲ್ಲಿ ಜರುಗಿಸಲು ಅನುಮತಿ ನೀಡುವಂತೆ ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರನ್ನು ಕೋರಿರುತ್ತಾರೆ.

ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ರಾಯಬಾಗ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರಾಯಬಾಗ, ಬೆಳಗಾವಿ ಜಿಲ್ಲೆ ಇವರು ಸದರಿ ಕಾರ್ಖಾನೆಯು 2000-01 ರಿಂದ 2010-11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ಜರುಗಿಸಲು ಹೆಚ್ಚಿನ ಹಣಕಾಸಿನ ಅವಶ್ಯಕತೆಯಿದ್ದು ಈಗ ಗುತ್ತಿಗೆದಾರರು ಪಾವತಿಸಿರುವ ಗುತ್ತಿಗೆ ಹಣವನ್ನು ಪ್ರಮುಖ ಶಾಸನಬದ್ಧ ಬಾಕಿಗಳನ್ನು ತೀರಿಸಲು ಉಪಯೋಗಿಸಲಾಗಿರುತ್ತದೆ. ಕಾರ್ಖಾನೆಯ ಹಣಕಾಸಿನ ಸಮಸ್ಯೆಗಳು ಇತ್ಯರ್ಥವಾಗದೆ ಬಾಕಿ ಇರುವುದರಿಂದ ಸದರಿ ಪ್ರಕರಣಗಳು ಇತ್ಯರ್ಥವಾದ ನಂತರ ವಿಶೇಷಾಧಿಕಾರಿಗಳು ನೀಡಿದ ವರದಿಯನ್ನು ಪರಿಶೀಲಿಸಿ ದಿನಾಂಕ 30-09-2012 ರವರೆಗೆ ವಾರ್ಷಿಕ ಮಹಾಸಭೆಯನ್ನು ಜರುಗಿಸಲು ಅನುಮತಿ ನೀಡಬಹುದಾಗಿದೆ ಎಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಅದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 30 ಸಸಕಾ 2010, ದಿನಾಂಕ : 05-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಯಭಾಗ ಸಹಕಾರ ಸಕ್ಕರೆ ಕಾರ್ಖಾನೆ ನಿ., ರಾಯಬಾಗ, ಬೆಳಗಾವಿ ಜಿಲ್ಲೆ ಇದರ 2000-01 ರಿಂದ 2010-11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ 30-09-2012ರೊಳಗಾಗಿ ಜರುಗಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಅಡಿಯಲ್ಲಿ ಹಾಗೂ ಪ್ರಕರಣ 121(1)ರ ಅಡಿಯಲ್ಲಿ ಕಾಲಾವಕಾಶ ನೀಡಲಾಗಿದೆ.

**ಸೂಚನೆ:**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30-09-2012ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 319

**ಶಿಕ್ಷಣ ಸಚಿವಾಲಯ**

**ವಿಷಯ :** ಶ್ರೀ ರತ್ನಕುಮಾರ್, ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಉಡುಪಿ ಜಿಲ್ಲೆ, ಇವರ ಮೇಲಿನ ಆರೋಪಗಳ ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ :**
1) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಸಿ2(3)ಪಅದೂ 43/2006–07, ದಿನಾಂಕ 20–10–2008.
2) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಡಿ 211 ಡಿಜಿಡಿ 2007, ದಿನಾಂಕ 11–12–2008
3) ಶ್ರೀ ರತ್ನಕುಮಾರ್ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ 05–01–2009
4) ಸರ್ಕಾರದ ಆದೇಶ ಸಂಖ್ಯೆ: ಇಡಿ 211 ಡಿಜಿಡಿ 2007, ದಿನಾಂಕ 30–04–2009
5) ಸರ್ಕಾರದ ಆದೇಶ ಸಂಖ್ಯೆ: ಇಡಿ 23 ಡಿಜಿಪಿ 2010, ದಿನಾಂಕ 26–08–2010
6) ವಿಚಾರಣಾ ವರದಿ ದಿನಾಂಕ 10–01–2011
7) ಎರಡನೆ ಕಾರಣ ಕೇಳುವ ನೋಟೀಸ್ ದಿನಾಂಕ 01–08–2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಪ್ರಸ್ತಾವನೆಯಲ್ಲಿ ಶ್ರೀ ರತ್ನಕುಮಾರ್, ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಉಡುಪಿ ಜಿಲ್ಲೆ, ಇವರ ಮೇಲೆ ಬಂದಿದ್ದ ಆರೋಪಗಳ ಬಗ್ಗೆ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣಾ ಪಟ್ಟಿಯೊಂದಿಗೆ ಪ್ರಸ್ತಾಪಿಸಲಾಗಿತ್ತು.

**ಆರೋಪ–1** ಶ್ರೀ ರತ್ನಕುಮಾರ್, ಪ್ರಾಂಶುಪಾಲರು, ಆದ ನೀವು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಉಡುಪಿ ಜಿಲ್ಲೆ, ಉಡುಪಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇಲಾಖೆ ಆದೇಶ ಅಥವಾ ಆಡಳಿತ ಪರಿಷತ್ತಿನ ಒಪ್ಪಿಗೆ ಇಲ್ಲದೇ ಪ್ರಥಮ ಟಿ.ಸಿ.ಹೆಚ್.ನ ಪ್ರತಿ ವಿದ್ಯಾರ್ಥಿಯಿಂದ ರೂ. 4,500/– ಹಾಗೂ ದ್ವಿತೀಯ ಟಿ.ಸಿ.ಹೆಚ್. ವಿದ್ಯಾರ್ಥಿಗಳಿಂದ ರೂ. 3,500/–ಹಣವನ್ನು ಅನಧಿಕೃತವಾಗಿ ವಸೂಲು ಮಾಡಿರುವುದು. ಸಭೆಯನ್ನು ರಚನೆ ಮಾಡಲು ಅಥವಾ ನಿರ್ವಹಣೆ ಮಾಡಲು ಸುತ್ತೋಲೆ ಇಲ್ಲದಿದ್ದರೂ ಶುಲ್ಕ ವಸೂಲಾದ ಬಗ್ಗೆ ನಡವಳಿ ಮಾಡಿ ವಸೂಲಾತಿ ಬಗ್ಗೆ ಸರ್ಕಾರದ ಆದೇಶವಿದ್ದು, ನೀವು ಅನಧಿಕೃತವಾಗಿ ವಿದ್ಯಾರ್ಥಿಗಳಿಂದ ಹೆಚ್ಚಿಗೆ ಶುಲ್ಕ ವಸೂಲು ಮಾಡಿರುತ್ತೀರಿ. ಹೆಚ್ಚಿನ ವಂತಿಗೆ ವಸೂಲು ಮಾಡಿ, ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು.

**ಆರೋಪ–2** ಉಡುಪಿ ಪ್ರಥಮ ಹಾಗೂ ದ್ವಿತೀಯ ಡಿ.ಎಡ್. ವಿದ್ಯಾರ್ಥಿಗಳಿಂದ ಹೆಚ್ಚುವರಿ ಹಣ ವಸೂಲು ಮಾಡಿರುವ ಬಗ್ಗೆ ಆಡಳಿತ ಸಮಿತಿ ಸಭೆಗೆ ಹಾಜರಾಗಲು ವಿವಿಧ ದಿನಾಂಕಗಳಲ್ಲಿ ಸಹಿ ಮಾಡಿದ್ದು, ನೀವು ಅನುಕೂಲಕ್ಕೆ ತಕ್ಕಂತೆ ದಾಖಲೆಗಳನ್ನು ಸೃಷ್ಟಿಸಿಕೊಂಡಿದ್ದು, ಅನಧಿಕೃತವಾಗಿ ವಸೂಲು ಮಾಡಿರುವ ಹಣವನ್ನು ನಿಮ್ಮ ಹೆಸರಿನಲ್ಲಿರುವ ಖಾತೆಗೆ ಜಮಾ ಮಾಡಿಕೊಂಡಿರುವುದು. ಈ ರೀತಿ ಅನಧಿಕೃತವಾಗಿ ವಸೂಲು ಮಾಡಿದ ಹಣವನ್ನು ನಗದು ಪುಸ್ತಕಕ್ಕೆ ತೆಗೆದುಕೊಳ್ಳಲು ಅವಕಾಶ ಇಲ್ಲದಿದ್ದರೂ ಈ ಸಂಬಂಧ ಖರ್ಚು ವೆಚ್ಚಗಳನ್ನು ಅನಧಿಕೃತವಾಗಿ ತಾವೇ ನಿರ್ವಹಿಸಿರುವುದು.

**ಆರೋಪ–3** ಸರ್ಕಾರ ನಿಗಧಿಪಡಿಸಿರುವ ಪರೀಕ್ಷಾ ಶುಲ್ಕ ರೂ. 75/– ಎಂಬುದಾಗಿದ್ದರೂ ಪರೀಕ್ಷಾ ಕಾರ್ಯಕ್ಕೆ ಅಧಿಕ ವೆಚ್ಚ ಮಾಡಿರುವುದಿಲ್ಲದೇ ಇದಕ್ಕೆ ಸಂಬಂಧಿಸಿದ ರಶೀದಿಗಳನ್ನು ತಾವೇ ನಿರ್ವಹಿಸಿ ಅವಶ್ಯಕತೆಗಿಂತ ಹೆಚ್ಚಿನ ಹಣ ಖರ್ಚು ಮಾಡಿರುವುದು.

**ಆರೋಪ–4** ಅನಧಿಕೃತವಾಗಿ ವಸೂಲು ಮಾಡಿರುವ ವಂತಿಗೆಯಲ್ಲಿ ಸಮವಸ್ತ್ರ ಖರೀದಿಯನ್ನು ಉಡುಪಿ ಟೌನ್‌ನಲ್ಲಿ ಖರೀದಿಸದೇ ನಿಮಗೆ ಅನುಕೂಲವಾಗಲು ಮೈಸೂರಿನಲ್ಲಿ ಸಮವಸ್ತ್ರವನ್ನು ಖರೀದಿಸಿದ್ದು ಖರೀದಿಸಿ ನೀಡಿರುವ ಸಮವಸ್ತ್ರದ ಬಗ್ಗೆ ವಿದ್ಯಾರ್ಥಿಯರನ್ನು ವಿಚಾರಿಸಲಾಗಿ ಸಮವಸ್ತ್ರದ ಬೆಲೆಯು ಮಾರುಕಟ್ಟೆಯಲ್ಲಿ ರೂ. 150/– ರಿಂದ ರೂ. 200/–ಆಗಿದ್ದು, ನೀವು ಖರೀದಿಸಿದ ಸಮವಸ್ತ್ರದ ಬೆಲೆ ರೂ. 600/– ಎಂಬುದಾಗಿ ತಿಳಿಸಿರುವುದು.

**ಆರೋಪ–5** ಸಂಸ್ಥೆಯ ವಿದ್ಯುತ್ ಬಿಲ್ಲಿಗಾಗಿ ಡಿ.ಎಸ್.ಇ.ಆರ್.ಟಿ. ಬೆಂಗಳೂರು, ಇವರಿಂದ ಸಾಕಷ್ಟು ಹಣ ಮಂಜೂರಾಗಿದ್ದರೂ ಈ ಸಂಸ್ಥೆಯ ವಿದ್ಯಾರ್ಥಿ ನಿಲಯದಲ್ಲಿ ವಾಸವಾಗಿರುವ ವಿದ್ಯಾರ್ಥಿಗಳಿಂದ ವಿದ್ಯುತ್ ಶುಲ್ಕಕ್ಕಾಗಿ ಪ್ರತಿ ವಿದ್ಯಾರ್ಥಿಯಿಂದ ರೂ. 500/– ವಸೂಲು ಮಾಡಿರುವುದು.

**ಆರೋಪ–6** ಸಾಮಗ್ರಿಗಳ ಖರೀದಿ, ಸಾದಿಲ್ವಾರು ಬಿಲ್ಲನ್ನು ಟ್ಯಾಕ್ಸ್ ಇನ್‌ವಾಯ್ಸ್ ಮೇಲೆ ಬಿಲ್ಲನ್ನು ತಯಾರಿಸಿ ಡ್ರಾ ಮಾಡಿ ಹಣ ಪಾವತಿಸಿರುವುದು.

**ಆರೋಪ–7** ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ ವತಿಯಿಂದ ನಡೆಸುವ ಟೆಲಿಕಾನ್ಫರೆನ್ಸ್‌ಗೆ ಡಯಟ್ ಅನುದಾನ ಹಾಗೂ ಎಸ್.ಎಸ್.ಎ. ನಿಧಿಯಿಂದ ತರಬೇತಿ ಕಾರ್ಯಕ್ರಮ ನಡೆಸಲಾಗಿದೆ. ತರಬೇತಿಗೆ ಉಪಯೋಗಿಸಿದ ರಶೀದಿಗಳಲ್ಲಿ ಜೆರಾಕ್ಸ್, ಜನರೇಟರ್ ಹಾಗೂ ಲೇಖನಾ ಸಾಮಗ್ರಿಗಳನ್ನು ಒಂದೇ ಅಂಗಡಿಯಲ್ಲಿ ಖರೀದಿಸಲಾಗಿದೆ. ಹಾಗೂ ಕೆಲವು ತರಬೇತಿಗಳಲ್ಲಿ ತರಬೇತಿ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ್ದು, ಅವರಿಗೆ ಮತ್ತೊಂದು ತರಬೇತಿಯಲ್ಲಿ ಆರ.ಪಿ.ಎಸ್. ಆಗಿ ಕಾರ್ಯನಿರ್ವಹಿಸಲು ಅನುಮತಿ ನೀಡಿದ್ದು, ಏಕ ಕಾಲದಲ್ಲಿಯೇ ಆರ್.ಪಿ.ಎಸ್. ಹಾಗೂ ಶಿಬಿರ ನಿರ್ದೇಶಕರ ಸಂಭಾವನೆಯನ್ನು ನೀಡಿರುತ್ತೀರಿ. ಎರಡು ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿ ಸಂಭಾವನೆಯನ್ನು ಎರಡೂ ಹುದ್ದೆಗಳಿಗೂ ನೀಡಿರುವುದು. ಡಯಟ್‌ನ ಸುತ್ತೋಲೆಯಲ್ಲಿ ತಿಳಿಸಿರುವಂತೆ ಡಯಟ್ ಸಿ.ಆರ್.ಪಿ. ಬಿ.ಆರ್.ಸಿ. ಸಿಬ್ಬಂದಿಗಳಿಗೆ ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯ ನಿರ್ವಹಿಸದೇ ಯಾವುದೇ ಸಂಭಾವನೆ ಇಲ್ಲ ಎಂಬುದಾಗಿ ಸೂಚನೆ ಇದ್ದರೂ ಎರಡು ಹುದ್ದೆಗಳಲ್ಲಿ ಏಕಕಾಲದಲ್ಲಿ ಕಾರ್ಯ ನಿರ್ವಹಿಸಿರುವವರಿಗೆ ಸಂಭಾವನೆ ನೀಡಲಾಗಿರುವುದು.

**ಆರೋಪ–8** ಎನ್.ಎಸ್.ಎಸ್. ದಿನಾಂಕ 06–03–2007ರಲ್ಲಿ ಯುವಜನೋತ್ಸವಕ್ಕಾಗಿ ಶಿಬಿರದ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆಗೆ ರೂ. 10,000/– ವೆಚ್ಚ ಮಾಡಿದೆ ಎಂದು ನಮೂದಿಸಲಾಗಿದ್ದು, ದಿನಾಂ 31–03–2007ರಲ್ಲಿ ವಿದ್ಯಾರ್ಥಿಗಳಿಂದ ಅನಧಿಕೃತವಾಗಿ ವಸೂಲಾದ ಹಣ ರೂ. 10,000/–ವನ್ನು ಖರ್ಚು ಮಾಡಿದೆ ಎಂದು ರಶೀದಿ ಇಟ್ಟಿರುವುದು ಹಣ ದುರುಪಯೋಗ ಪಡಿಸಿಕೊಂಡಿರುವುದು.

**ಆರೋಪ–9** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಭೇಟಿ ಕಾಲದಲಿ ಕಡಿಮೆ ಸಾಧನೆ ತೋರಿಸಿರುವ ಶಾಲೆಗಳಿಗೆ ಭೇಟಿ ನೀಡುವಂತೆ ಸೂಚಿಸಿದ್ದರೂ ನೀವು ನಿಯೋಜನೆ ಆದೇಶವಿಲ್ಲದೇ ಹಿರಿಯ ಉಪನ್ಯಾಸಕರ ಪ್ರವಾಸ ಕಾರ್ಯಕ್ರಮ ನೀಡಿ ಪ್ರವಾಸ ಮಾಡಬಾರದಾಗಿ ಕಚೇರಿ ಆದೇಶವನ್ನು ಹೊರಡಿಸಿ ಮೇಲಾಧಿಕಾರಿಗಳ ಆದೇಶವನ್ನು ದಿಕ್ಕರಿಸಿರುವುದು.

**ಆರೋಪ–10** ಡಯಟ್‌ನ ಪಿ.ಎಸ್.ಟಿ.ಇ. ವಿಭಾಗಕ್ಕೆ ಹಿರಿಯ ಉಪನ್ಯಾಸಕರನ್ನು ನೇಮಿಸುವಂತೆ ಅದೇಶವಿದ್ದರೂ ನೀವು ಏಕಪಕ್ಷೀಯವಾಗಿ ಉಪನ್ಯಾಸಕರಾದ ಶ್ರೀ ಶಂಕರಯ್ಯ, ಎಂಬುವರನ್ನು ಅನಧಿಕೃವಾಗಿ ವಂತಿಗೆ ವಸೂಲು ಮಾಡಲು ನೇಮಿಸಿಕೊಂಡು ನಿಯಮಗಳನ್ನು ಉಲ್ಲಂಘಿಸಿರುವುದು.

ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಸದರಿಯವರ ವಿರುದ್ಧ ಬಂದಿದ್ದ ಆರೋಪಗಳ ಹಿನ್ನೆಲೆಯಲ್ಲಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮ 11ರನ್ವಯ ಕಾರಣ ಕೇಳುವ ನೋಟೀಸು ಜಾರಿಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಆರೋಪಿತ ಅಧಿಕಾರಿಯು ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (5)ರಲ್ಲಿ ಶ್ರೀ ರತ್ನಕುಮಾರ್, ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಉಡುಪಿ ಜಿಲ್ಲೆ, ಇವರ ಮೇಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಕೂಲಂಕುಷವಾಗಿ ವಿಚಾರಣೆ ಮಾಡುವುದು ಸೂಕ್ತವೆಂದು ಪರಿಗಣಿಸಿ ಸರ್ಕಾರವು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಲಾಗಿತ್ತು. ಅದರಂತೆ ಕ್ರಮ ಸಂಖ್ಯೆ (6)ರಲ್ಲಿ ವಿಚಾರಣಾ ವರದಿಯು ಸರ್ಕಾರದಲ್ಲಿ ಸ್ವೀಕೃತವಾಗಿರುತ್ತದೆ. ಈ ವಿಚಾರಣಾ ವರದಿಯಲ್ಲಿ ಆರೋಪಿತರ ಮೇಲೆ ಹೊರಿಸಲಾಗಿದ್ದ 10 ಆರೋಪಗಳ ಪೈಕಿ ಕ್ರಮ ಸಂಖ್ಯೆ 6 ಮತ್ತು 7ನೇ ಆರೋಪವು ಸಾಬೀತಾಗಿರುವುದಾಗಿ ತಿಳಿಸಿರುವುದರಿಂದ ಈ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಅಧಿಕಾರಿಗೆ ಕ್ರಮ ಸಂಖ್ಯೆ (7)ರಲಿ ಎರಡನೆ ಕಾರಣ ಕೇಳುವ ನೋಟೀಸಿನ ವಿವರಣೆ ಕೊರಲಾಗಿತ್ತು. ಅವಕಾಶ ನೀಡಲಾಗಿತ್ತು. ಆದರೆ, ಆರೋಪಿತ ಅಧಿಕಾರಿಯ ವಿಚಾರಣಾ ವರದಿಯಲ್ಲಿನ ಅಂಶಗಳ ಬಗ್ಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ನಿಗದಿತ ಅವಧಿಯಲಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸದೇ ಇರುವುದರಿಂದ ಅವರ ಹೇಳಿಕೆ ಏನು ಇರುವುದಿಲ್ಲವೆಂದು ಪರಿಗಣಿಸಿದೆ.

ಸದರಿಯವರ ಮೇಲಿನ ಆರೋಪಗಳ ಬಗ್ಗೆ ವಿಚಾರಣಾ ವರದಿಯನ್ನು ನಿಯಮಗಳನುಸಾರ ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆರೋಪ–5, 6 ಮತ್ತು 7ಕ್ಕೆ ಸಂಬಂಧಿಸಿದಂತೆ ಆರೋಪಿತರು ಪ್ರತಿರಕ್ಷಣಾ ಹೇಳಿಕೆಯಲ್ಲಿ ಪ್ರತಿಪಾದಿಸಿದ ಅಂಶಗಳ ಬಗ್ಗೆ ಸಮಂಜಸವಾದ ಕಾರಣಗಳು ಇಲ್ಲದೇ ಇರುವುದರಿಂದ ವಿವರಣೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ತೀರ್ಮಾನಿಸಿದ್ದು ಶ್ರೀ ರತ್ನಕುಮಾರ್, ಇವರ ಮೇಲೆ ಹೊರಿಸಲಾದ ಆರೋಪಗಳಿಗೆ ಸಂಬಂಧಿಸಿದಂತೆ ನಡೆದ ಇಲಾಖಾ ವಿಚಾರಣಾ ವರದಿಯಲ್ಲಿ ಆರೋಪಿತ ನೌಕರರು ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಗಳು 1966ರ ನಿಯಮ 3 (i)(i)(ii)(iii) ರನ್ನು ಉಲ್ಲಂಘಿಸಿರುವುದರಿಂದ ಆರೋಪಿತ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ–8 ರನ್ವಯ ಅವರ ವಾರ್ಷಿಕ ಬಡ್ತಿಯನ್ನು ಸಂಚಿತ ಪರಿಣಾಮರಹಿತವಾಗಿ ತಡೆಹಿಡಿಯುವ ದಂಡನೆ ವಿಧಿಸುವ ಹಾಗೂ ಸದರಿಯವರಿಂದ ಹೆಚ್ಚುವರಿಯಾಗಿ ಪಾವತಿಯಾಗಿರುವ ಹಣವನ್ನು ಇಲಾಖೆಗೆ ವಸೂಲಿ ಮಾಡುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 23 ಡಿಜಿಪಿ 2010, ಬೆಂಗಳೂರು, ದಿನಾಂಕ : 09–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ರತ್ನಕುಮಾರ್, ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಉಡುಪಿ ಜಿಲ್ಲೆ. ಇದರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ–8 (iii) ರನ್ವಯ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮರಹಿತವಾಗಿ ತಡೆಹಿಡಿಯುವ ದಂಡನೆ ವಿಧಿಸಿದೆ. ಹಾಗೂ ಸದರಿಯವರಿಂದ ಹೆಚ್ಚುವರಿ ಹಣವನ್ನು ಇಲಾಖೆಗೆ ಅವರಿಂದ ವಸೂಲಿ ಮಾಡುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಆಡಳಿತ)

ಪಿ.ಆರ್. 320